

# ಇಬ್ಬರು ಮೋಸಗಾತಿಯರು

ಹಾರೂನ್ ಅಲ್ ರಷೀದ್ ಬಾಗ್ದಾದಿನ ಖಲೀಫನಾಗಿದ್ದ ಕಾಲದಲ್ಲಿ ಆ ರಾಜ್ಯದೊಳಗೆಲ್ಲಾ ಪಾರಿವಾಳಗಳ ಅಂಚೆ ಪದ್ಧತಿ ಅಮಲಿನಲ್ಲಿದ್ದಿತು. ಒಬ್ಬ ದೊಡ್ಡ ಮನುಷ್ಯನು ಅದನ್ನು ನಡೆಯಿಸಿಕೊಂಡಿದ್ದನು. ಖಲೀಫನು ಅವನನ್ನು ಅಕ್ಕರೆಯಿಂದ ನೋಡಿಕೊಳ್ಳುತ್ತಿದ್ದನು. ಅವನಿಗೆ ತಿಂಗಳಿಗೆ ಒಂದು ಸಾವಿರ ದಿನಾರಗಳು ಸಂಬಳವಾಗಿದ್ದಿತು.

ಕಾಲಕ್ರಮದಲ್ಲಿ ಆ ದೊಡ್ಡ ಮನುಷ್ಯನು ತೀರಿ ಹೋದ ಮೇಲೆ ಪಾರಿವಾಳಗಳ ಅಂಚೆಗೂ ಅಂತ್ಯ ಬಂದಿತು. ಅವನು ಅಂಚೆಯ ಕೆಲಸಕ್ಕಾಗಿ ಇಟ್ಟು ಕೊಂಡಿದ್ದ ಪಾರಿವಾಳಗಳನ್ನೂ, ಅವನ ನಲುವತ್ತು ಮಂದಿ ನೀಗ್ರೋ ಗುಲಾಮರನ್ನೂ, ನಲುವತ್ತು ಬೇಟೆನಾಯಿಗಳನ್ನೂ ಖಲೀಫನೇ ಇಟ್ಟುಕೊಂಡನು.

ಪಾರಿವಾಳಗಳ ಅಂಚೆಯ ಅಧಿಕಾರಿಯ ಹೆಂಡತಿಯ ಹೆಸರು ದಿಲ್ಲೈಲಾ. ಅವಳಿಗೆ ಒಬ್ಬಳು ಮಗಳೂ ಇದ್ದಳು. ಮಗಳ ಹೆಸರು ಜೇನಾಬ್. ಗಂಡ ತೀರಿಹೋದ ಮೇಲೆ, ಆತನ ಸ್ಥಾನದಲ್ಲಿ ತಾನೇ ಇದ್ದು ಅಂಚೆಗಳ ಟಪಾಲಿನ ಕೆಲಸಮಾಡ ಬಲ್ಲೆನೆಂದೂ, ತನಗೆ ಆ ಉದ್ಯೋಗವನ್ನು ಕೊಟ್ಟು, ತನ್ನ ಗಂಡನಿಗೆ ಕೊಟ್ಟ ಸಂಬಳವನ್ನೇ ತನಗೂ ಕೊಡಬೇಕೆಂದೂ ದಿಲ್ಲೈಲಾ ಖಲೀಫನಿಗೆ ಅರ್ಜೀ ಬರೆದುಕೊಂಡಳು. ಈ ಅರ್ಜೀ ಕಸದಬುಟ್ಟಿಗೆ ಸೇರಿತು. ದಿಲ್ಲೈಲಾಳ ಶಕ್ತಿ ಖಲೀಫನಿಗೆ ತಿಳಿಯದು.

ಈ ಸಂಗತಿ ನಡೆದ ಕೆಲವು ದಿನಗಳ ಮೇಲೆ ಖಲೀಫನು ಇಬ್ಬರು ಚೋರಾಗ್ರೇಸರರನ್ನು ಕೋತ್ವಾಲನ ಪದವಿಗೆ ನಿಯಮಿಸಿಬಿಟ್ಟನು. ಆ ಕಳ್ಳರಲ್ಲಿ ಒಬ್ಬನ ಹೆಸರು ಅಹ್ಮದ್. ಎರಡನೆಯವನ ಹೆಸರು ಹಸನ್. ಅವರಿಬ್ಬರ ಕಳ್ಳತನದ ಸಾಮರ್ಥ್ಯ ಬಹು ದೊಡ್ಡದು. ಅವರನ್ನು ಹಿಡಿಯಲು ಖಲೀಫನು ಎಷ್ಟು ಪ್ರಯತ್ನ ಮಾಡಿದರೂ ವ್ಯರ್ಥವಾಗಿದ್ದುವು. ಅಷ್ಟೊಂದು ಬುದ್ಧಿವಂತಿಕೆಯುಳ್ಳ ಕಳ್ಳರನ್ನು ಕೊತ್ವಾಲ ಪದವಿಗೆ ನಿಯಮಿಸಿಬಿಟ್ಟರೆ ಒಳ್ಳೆಯದೆಂದು ಖಲೀಫನಿಗೆ ತೋರಿತ್ತು. ಈ ಸಂಗತಿಯನ್ನು ಪ್ರಕಟಿಸಿ ಅವರನ್ನು ಬರಮಾಡಿ, ಕೋತ್ವಾಲ ಪದವಿಗಳನ್ನು ಕೊಟ್ಟಿದ್ದನು.

ತನ್ನ ಅರ್ಜಿಯನ್ನು ತಿರಸ್ಕಾರಮಾಡಿ, ಯಾರೋ ಇಬ್ಬರು ಕಳ್ಳರಿಗೆ ಉನ್ನತ ಪದವಿಗಳನ್ನು ಕೊಟ್ಟ ಖಲೀಫನ ಮೇಲೆ ದಿಲ್ಲೈಲಾ ಕೆಂಡವಾದಳು. "ಈ

ದೇಶದಲ್ಲಿ ಕಳ್ಳರಿಗೂ ಮೋಸಗಾರರಿಗೂ ಇಷ್ಟೊಂದು ಗೌರವವಿರುವುದಾದರೆ, ನಾವು ಮಾತ್ರ ಕಡಿಮೆಯವರೆಂದುಕೊಂಡರೋ? ನೋಡಿದೆಯಾ ಜೀನಾಬ್! ಈ ಅಹ್ಮದ್ ಹಸನ್ನರು ನನ್ನ ಮುಂದೆ ಯಾವುದಕ್ಕೂ ಉಪಯೋಗವಿಲ್ಲದವರೆಂದು ನಿರೂಪಿಸಿಬಿಡುತ್ತೇನೆ!" ಎಂದಳು ಮಗಳೊಂದಿಗೆ.

ನಿಜಕ್ಕೂ ದಿಲ್ಲೈಲಾ ವಯಸ್ಸಿನಲ್ಲಿ ವೃದ್ಧಳಾದರೂ ಯುಕ್ತಿಯಲ್ಲಿ ಮಹಾ ನಿಪುಣೆ. ಅವಳ ಮಗಳು ಜೀನಾಬ್ ಕೂಡಾ ತಾಯಿಗೆ ಒಂದಿಷ್ಟೂ ಕಡಿಮೆಯವಳಲ್ಲ. ತಾಯಿಯ ಪ್ರತಿಜ್ಞೆ ಮಗಳನ್ನು ಮೆಚ್ಚಿಸಿತು.

ತನ್ನ ಮೋಸಗಳಿಂದ ಇಡಿಯ ಬಾಗ್ದಾದನ್ನೇ ಮಾರ್ಮೊಳಗಿಸಿ ಬಿಡಬೇಕೆಂದು ದಿಲ್ಲೈಲಾ ಹಟಗಟ್ಟಿದ್ದಳು. ಅದಕ್ಕಾಗಿ ಅವಳು ಸೂಫೀ ಸನ್ಯಾಸಿನಿಯ ಹಾಗೆ ವೇಷ ಧರಿಸಿಕೊಂಡಳು. ಕೊರಳಲ್ಲಿ ತುಂಬಾ ಮಣಿಸರಗಳನ್ನು ಹಾಕಿಕೊಂಡಳು. ಕೈಯಲ್ಲಿ ಸೂಫೀ ಸನ್ಯಾಸಿಗಳು ಹಿಡಿದುಕೊಳ್ಳುವ ಪತಾಕೆಯನ್ನು ಹಿಡಿದುಕೊಂಡು ತನ್ನ ಮನೆಯಿಂದ ಹೊರಟಳು ವೃದ್ಧೆ ದಿಲ್ಲೈಲಾ.

ಬಾಗ್ದಾದಿನಲ್ಲಿರುವ ದೊಡ್ಡ ಮನುಷ್ಯರ ಸಾಲಿನಲ್ಲಿ ರಕ್ಷಕಭಟರ ಮುಖಂಡನಾದ ಮುಸ್ತಫಾ ಎಂಬುವನೊಬ್ಬನು. ಅವನಿಗೆ ಭಾರಿ ಸಂಬಳವಿತ್ತು. ಬ್ರಹ್ಮಾಂಡದಂತಹ ಅವನ ಸುಂದರವಾದ ಮನೆಗೆ ಗಂಧದ ಹಲಗೆಗಳಿಂದಾದ ಬಾಗಿಲುಗಳೂ, ಬೆಳ್ಳಿಯ ಬೀಗಗಳೂ ಇದ್ದುವು. ಇಷ್ಟೊಂದು ಐಶ್ವರ್ಯದಲ್ಲಿ ತೇಲಾಡುವ ಮುಸ್ತಫಾನ ಹೆಂಡತಿ ಚಿಕ್ಕವಯಸ್ಸಿನ ಖಾತೂನ್ ಎಂಬುವಳು ಬಲು ಚೆಲುವೆ. ಹೆಂಡತಿಯ ಮೇಲೆ ಮುಸ್ತಫಾ ಜೀವವನ್ನಿಟ್ಟಿದ್ದನು. ಆದ್ದರಿಂದಲೇ ಅವಳು ಸಂತಾನವತಿಯಾಗದಿದ್ದರೂ, ಇನ್ನೊಬ್ಬಳನ್ನು ಮದುವೆಯಾಗದಿದ್ದನು. ಅವನ ಸಹೋದ್ಯೋಗಿಗಳೂ, ಜೊತೆಯ ಅಧಿಕಾರಿಗಳೂ ಖಲೀಫರ



ದಿವಾನಕ್ಕೆ ತಮ್ಮ ಪುತ್ರರೊಂದಿಗೆ ಬಂದಾಗ ಮುಸ್ತಫಾ ಒಳಗೊಳಗೇ ಕುದಿಯುವನು.

ಖಾತೂನ್ ಕೂಡಾ ತನಗೆ ಮಕ್ಕಳಾಗಲಿಲ್ಲವೆಂದು ತುಂಬಾ ಚಿಂತಿಸುತ್ತಿದ್ದಳು. ತನ್ನ ಗಂಡ ಮಕ್ಕಳಿಗಾಗಿ ಬೇಯುತ್ತಿರುವ ಸಂಗತಿ ಅವಳಿಗೆ ಗೊತ್ತು. ಮಕ್ಕಳಾಗಬೇಕೆಂದು ಅವಳು ಎಷ್ಟೋ ಉಪಕ್ರಿಯೆಗಳನ್ನು ಮಾಡಿಕೊಂಡಿದ್ದಳು. ಔಷಧ ಸೇವಿಸಿದ್ದಳು. ಮಸೀದಿಗಳಿಗೆ ಸೇವೆ ಸಲಿಸಿದ್ದಳು. ಎಲ್ಲವೂ ನಿರರ್ಥಕವಾಗಿತ್ತು.

ಸೂಫೀ ಸನ್ಯಾಸಿನಿಯ ವೇಷದಲ್ಲಿ ದಿಲ್ಲೈಲಾ, "ಅಲ್ಲಾ! ಅಲ್ಲಾ!" ಎಂದು ಕೂಗುತ್ತಾ ಬೀದಿಯಲ್ಲಿ ಮುಸ್ತಫಾನ ಮನೆಯ ಹತ್ತಿರ ಬಂದಳು. ಅವಳು ತಲೆಯೆತ್ತಿ ನೋಡಿದಾಗ, ಉಪ್ಪರಿಗೆಯ ಕಿಟಕಿಯಲ್ಲಿ ಖಾತೂನ್ ತನ್ನನ್ನೇ ನೋಡುವುದನ್ನು ಗಮನಿಸಿದಳು. ಮೈತುಂಬಾ ಆಭರಣಗಳನ್ನು ಧರಿಸಿ ಹೊಸ ಮದುಮಗಳ ಹಾಗೆ ಖಾತೂನ್ ಹೊಳೆಯು



ತ್ತಿದ್ದಳು. "ಈ ಹುಡುಗಿಯನ್ನು ತೆಗೆದುಕೊಂಡು ಹೋಗಿ ಇವಳ ನಗಗಳನ್ನೆಲ್ಲಾ ಅಪಹರಿಸದಿದ್ದರೆ, ನನ್ನ ಪ್ರಜ್ಞೆಗೆ ಬೆಲೆಯೇ ಇಲ್ಲ! ಕಸಕ್ಕೆ ಸಮ!" ಎಂದುಕೊಂಡಳು ದಿಲ್ಲೈಲಾ.

ಸೂಫೀ ಸನ್ಯಾಸಿಯಂತಿರುವ ದಿಲ್ಲೈಲಾಳನ್ನು ನೋಡಿದ ಕೂಡಲೇ ಖಾತೂನಳಿಗೆ ಕೂಡಾ ಆಶೆ ಮೇಲೆದ್ದಿತು. ಈ ಸೂಫೀ ಸನ್ಯಾಸಿನಿಯ ಅನುಗ್ರಹವನ್ನು ಸಂಪಾದಿಸಿದರೆ ತನಗೇನಾದರೂ ಸಂತಾನವಾಗಬಹುದೆಂದು ಅವಳಿಗೆ ತೋರಿತು. ಅಂತೆಯೇ ಖಾತೂನ್ ದಿಲ್ಲೈಲಾಳನ್ನು ಕರೆದುಕೊಂಡು ಬರಲು ತನ್ನ ದಾಸಿಯನ್ನು ಕಳುಹಿಸಿಕೊಟ್ಟಳು.

ದಿಲ್ಲೈಲಾ ಬಂದ ಕೂಡಲೇ ಖಾತೂನ್ ಅವಳ ಪಾದಗಳ ಮೇಲೆ ಬಿದ್ದು, ತನ್ನ ಮನಸ್ಸಿನಲ್ಲಿದ್ದ ಮಹಾ ಚಿಂತೆಯನ್ನು ಅವಳೊಡನೆ ಹೇಳಿಕೊಂಡಳು. ಅದನ್ನೆಲ್ಲಾ ಕೇಳಿ ದಿಲ್ಲೈಲಾ, "ಇದೇನೂ ಅಂಥ ದೊಡ್ಡ ಸಮಸ್ಯೆ ಅಂದುಕೊಂಡೆಯಾ? ಈ ನಗರದಲ್ಲೇ ಸಂತಾನಸಾಧು ಎಂಬವನಿದ್ದಾನೆ. ಅವನನ್ನು ನೀನು ಒಂದುಸಾರಿ ನೋಡಿ ಆಶೀರ್ವಾದ ಪಡೆದರೇ ಸಾಕು. ನಿನ್ನ ಅಭೀಷ್ಟ ಸಿದ್ಧಿಸುವ ಮಾರ್ಗ ಅವನು ತೋರಿಸುತ್ತಾನೆ." ಎಂದಳು.

ಅದನ್ನು ಕೇಳಿ ಖಾತೂನ್ ವಿಚಾರ ವ್ಯಕ್ತಪಡಿಸುತ್ತ, "ನಾನು ಈವರೆಗೂ ಯಾವ ಪುಣ್ಯಕ್ಕೂ ಮನೆಬಿಟ್ಟು ಹೊರಗೆ ಹೋದವಳಲ್ಲ. ಒಬ್ಬಳೇ ಹೇಗೆ ಹೋಗಲಿ?' ಎಂದಳು.

"ಹಾಗಾದರೆ ಈಗಲೇ ನನ್ನ ಜತೆಯಲ್ಲಿ ಬಂದುಬಿಡು. ನಿನ್ನನ್ನು ಆ ಸಾಧುವಿನ ಬಳಿಗೆ ಕರೆದುಕೊಂಡು ಹೋಗುತ್ತೇನೆ. ನಿನ್ನ ಗಂಡ ಮನೆಗೆ ಬರುವುದರೊಳಗೆ ನೀನು ಮನೆಗೆ ಹಿಂದಿರುಗಿ ಬಂದುಬಿಡಬಹುದು. ನಿನ್ನಂಥವಳಿಗೆ ಉಪಕಾರ ಮಾಡುವುದೇ ನನ್ನ ಧರ್ಮ" ಎಂದಳು.

ತನ್ನ ಬಯಕೆ ಈಡೇರುವುದೆಂಬ ಆನಂದದಲ್ಲಿ ಖಾತೂನ್ ತನ್ನ ಉಳಿದ ಆಭರಣಗಳನ್ನು ಕೂಡಾ ಧರಿಸಿಕೊಂಡು ದಿಲ್ಲೈಲಾಳೊಂದಿಗೆ ಹೊರಟುಬಿಟ್ಟಳು. ಅವರಿಬ್ಬರೂ ಸ್ವಲ್ಪದೂರ ಹೋದಾಗ ಸಿದ್ದೀಮೊಹಸಿನ್ ಎಂಬವನ ಅಂಗಡಿಯೊಂದು ಬಂದಿತು. ಈ ಅಂಗಡಿಯ ಒಡೆಯನು ಯುವಕನಾಗಿದ್ದನು. ಅವನಿಗೆ ಇನ್ನೂ ಮದುವೆಯಾಗಿರಲಿಲ್ಲ. ಅಂಗಡಿಯ ಮುಖದ್ವಾರದಲ್ಲೇ ನಿಂತಿರುವ ಆತನನ್ನು ನೋಡಿದ ಕೂಡಲೇ ದಿಲ್ಲೈಲಾಳಿಗೆ ಒಂದು ಆಲೋಚನೆ ಹೊಳೆಯಿತು. ಅವಳು ಖಾತೂನಳನ್ನು ಹೊರಗಿನ ಜಗಲಿಯಲ್ಲಿ ಕುಳ್ಳಿರಿಸಿ, ಮೊಹಸಿನನ ಅಂಗಡಿ ಹೋಗಿ, ಮೊಹಸಿನನೊಂದಿಗೆ, "ಅಕೋ ಅಲ್ಲಿ ಕುಳಿತಿರುವವಳು ನನ್ನ ಮಗಳು. ತುಂಬಾ ಚೆಲುವೆ. ನಿನ್ನಂತಹ ಬುದ್ಧಿವಂತನೊಬ್ಬನನ್ನು ನೋಡಿ ಮದುವೆ ಮಾಡಿಬಿಟ್ಟೆನೆಂದರೆ ನನ್ನ ಕರ್ತವ್ಯ ಮುಗಿಯಿತು. ಅವಳ ತಂದೆ ವ್ಯಾಪಾರದಲ್ಲಿ ಅಪಾರ ಹಣ ಸಂಪಾದಿಸಿಟ್ಟಿದ್ದಾರೆ. ನೀನು ಕೇಳುವ ಶುಲ್ಕ

ಕೊಡುತ್ತಾರೆ. ಇಂತಹ ಇನ್ನೆರಡು ಅಂಗಡಿ ಇಟ್ಟು ಕೊಳ್ಳಬಹುದು ನೀನು" ಎಂದಳು.

ಮೊಹಸಿನನಿಗಾದ ಸಂತೋಷವನ್ನು ಹೇಳಿ ತೀರದು. "ಮದುವೆ ಯಾವಾಗ ಖರಾರು ಪಡಿಸೋಣ ?" ಎಂದು ಕೇಳಿದನು ಅತ್ಯಾತುರದಿಂದ.

"ನನ್ನೊಂದಿಗೆ ಬಂದರೆ ಈಗಲೇ ಖರಾರು ಮಾಡಿಕೊಳ್ಳಬಹುದು" ಎಂದಳು ದಿಲ್ಲೈಲಾ. ಮೊಹಸಿನ್ ಒಂದು ಸಾವಿರ ದೀನಾರಗಳ ಚೀಲದ ಗಂಟನ್ನು ಕಂಕುಳಲ್ಲಿಟ್ಟುಕೊಂಡು ಹೊರಟನು.

ದಿಲ್ಲೈಲಾ ಖಾತೂನಳನ್ನು ಹೊರಡಿಸಿ, ಮೊಹಸಿನ ನೊಂದಿಗೆ ಹೋಗುತ್ತಿರುವಾಗ, ಹಾಜ್ ಮುಹಮ್ಮದ್ ಎಂಬ ರಂಗಾರಿಯ ಅಂಗಡಿ ಬಂದಿತು. ದಿಲ್ಲೈಲಾ ತನ್ನೊಂದಿಗಿದ್ದ ಇಬ್ಬರನ್ನೂ ತುಸು ದೂರದಲ್ಲಿ ಮಾತಾಡದೆ ನಿಲ್ಲುವಂತೆ ಹೇಳಿ. ದಿಲ್ಲೈಲಾ ಅಂಗಡಿಯೊಳಗೆ ಹೋದಳು.

"ಅಯ್ಯಾ, ಅಲ್ಲಿ ನಿಂತಿರುವವರಿಬ್ಬರೂ ನನ್ನ ಮಗ ಮತ್ತು ಮಗಳು. ಹಳೆಯದಾದ ನಮ್ಮ ಮನೆ ಮಗುಚಿ ಬೀಳುವ ಸ್ಥಿತಿಗೆ ಬಂದುದರಿಂದ ದುರಸ್ತಿ ಪ್ರಾರಂಭಿಸಿದ್ದೇವೆ. ನಿಮಗೆ ತಿಳಿದಂತೆ ಇಲ್ಲೆಲ್ಲಾದರೂ ಖಾಲೀ ಮನೆಯಿದೆಯೋ? ನಾಲ್ಕುದಿನಗಳವರೆಗೆವಾಸ ಮಾಡಲು ಸಿಕ್ಕಿದರೆ ಸಾಕು." ಎಂದು ದಿಲ್ಲೈಲಾ ರಂಗಾರಿ ಹಾಜ್ ಮುಹಮ್ಮದನೊಂದಿಗೆ ವಿಚಾರಿಸಿದಳು.

ಆವನು ಆಲೋಚನೆ ಮಾಡಿ, "ನನ್ನ ಮನೆಯ ಮೇಲಿನ ಭಾಗವು ಖಾಲೀಯಾಗಿಯೇ ಇದೆ. ಕೆಳಗೆ ನಾನಿರುತ್ತೇನೆ. ಈ ಪ್ರಾಂತಕ್ಕೆ ನೀಲಿರಂಗು ಮಾರಲು ಬರುವವರು ತಂಗಲಿಕ್ಕಾಗಿ ಉಪ್ಪರಿಗೆಯ ಭಾಗವನ್ನು ಖಾಲಿಯಾಗಿರಿಸಿದ್ದೇನೆ. ನಾಲ್ಕು ದಿನಗಳ ವರೆಗೆ ನೀವು ಉಪಯೋಗಿಸಿಕೊಳ್ಳಲು ಅಡ್ಡಿಯಿಲ್ಲ. ಇಗೊಳ್ಳಿ, ಬೀಗದ ಕೈ" ಎಂದನು.

ದಿಲ್ಲೈಲಾ ಖಾತೂನಳನ್ನೂ ಮೊಹಸಿನನನ್ನೂ ಕರೆದುಕೊಂಡು ಹಾಜ್ ಮುಹಮದನ ಮನೆಯ



ಬೀದಿಗೆ ಹೋಗಿ, ಆ ಮನೆಯ ಕೆಳಭಾಗವನ್ನು ತೆರೆದು ಒಳಗೆ ಹೋಗುವಂತೆ ಮೊಹಸಿನನಿಗೆ ಸನ್ನೆ ಮಾಡಿದಳು. ಆಮೇಲೆ ಅವಳು ಖಾತೂನಳ ಜತೆಯಲ್ಲಿ ಉಪ್ಪರಿಗೆಗೆ ಹೋಗಿ, ಅವಳೊಂದಿಗೆ, "ಹುಡುಗೀ, ನಾನು ಹೇಳಿದ ಸಾಧು ಈ ಮನೆಯ ಕೆಳಭಾಗದಲ್ಲೇ ಇದ್ದಾನೆ. ನಾನು ಹೋಗಿ ಅವನೊಂದಿಗೆ ನಿನ್ನ ವಿಷಯವನ್ನು ಹೇಳಿ ಈಗಲೇ ಬರುತ್ತೇನೆ. ನೀನು ನಿನ್ನ ನಗಗಳನ್ನೆಲ್ಲಾ ತೆಗೆದು ಗಂಟುಕಟ್ಟಿಡು, ಆತನನ್ನು ನಿರಾಡಂಬರಳಾಗಿ ನೋಡ ಬೇಕಮ್ಮ. ನಗ ನಾಣ್ಯಗಳ ಹೊಳಪು ಕಂಡರೆ ಅವನಿಗಾಗದು" ಎಂದು ಹೇಳಿ ಕೆಳಗೆ ಹೋದಳು.

ಮೊಹಸಿನ್ ಅವಳನ್ನು ನೋಡಿ, "ಕರಾರಿಗೆ ಇನ್ನು ಯಾರೆಲ್ಲ ಬರಬೇಕು ?" ಎಂದು ಕೇಳಿದನು.

ದಿಲ್ಲೈಲಾ ಅಳುಮೋರೆ ಮಾಡಿಕೊಂಡು, "ಮೊದಲು ಹುಡುಗಿ ನಿನ್ನ ನೋಡಿ ಒಪ್ಪಿಕೊಳ್ಳ ಬೇಕಲ್ಲಪ್ಪಾ ! ನಿನ್ನನ್ನು ಅವಳು ಯಾರಿಂದಲೋ

ಅರಿತಿದ್ದಾಳಂತೆ. ಯಾರೋ ಹೊಟ್ಟೆ ಕಿಚ್ಚಿನವರು ಅವಳ ಮನಸ್ಸನ್ನು ಕೆಡಿಸಿಬಿಟ್ಟಿದ್ದಾರೆ. ನಿನ್ನ ಶರೀರ ದಲ್ಲಿ ಹುಳುಕಜ್ಜಿಯಿದೆಯಂತೆ; ಬಿಳಿತೊನ್ನು ಇದೆಯಂತೆ. ಚಾಡೀಗಾರರಿಗೇನು, ಬಾಯಿಗೆ ಬಂದ ಹಾಗೆ ಹೇಳಿಬಿಟ್ಟಿದ್ದಾರೆ. ನೀನು ಬೇಡವೇ ಬೇಡ ವೆನ್ನುತ್ತಾಳೆ. ಒಂದು ಮಾಡು. ಅಂಗಿ ತೆಗೆದು ಕುಳಿತಿರು. ಅವಳಿಗೆ ನಿನ್ನನ್ನು ತೋರಿಸಿ ಒಪ್ಪಿಸಿ ಬಿಡು ತ್ತೇನೆ. ನಿನ್ನ ಚೀಲವನ್ನೂ, ಅಂಗಿಯನ್ನೂ ನನ್ನ ಕೈಗೆ ಕೊಡು. ಮೇಲೆ ಭದ್ರವಾಗಿಟ್ಟಿರುತ್ತೇನೆ" ಎಂದಳು.

ಮೊಹಸಿನ್ ದೀನಾರಗಳ ಚೀಲವನ್ನೂ, ಅಂಗಿ ಯನ್ನೂ ಅವಳ ಕೈಗೆ ಕೊಟ್ಟನು. ಅವಳು ಮತ್ತೆ ಮೇಲೆ ಹೋಗಿ ಖಾತೂನಳೊಂದಿಗೆ, "ನಿನಗಾಗಿ ಸಾಧು ಇದಿರು ನೋಡಿಕೊಂಡಿದ್ದಾನೆ. ನಿನ್ನ ಬಯಕೆ ಈಡೇರಿದ ಹಾಗೆಯೇ ತಿಳಿ, ನಡೆ, ಹೋಗೋಣ, ನಗಗಳ ಮೂಟೆ ಹೀಗೆ ಕೊಡು. ಹಿಂದೆಯೇ ಬರುತ್ತೇನೆ. ನೀನು ಕೆಳಗಿಳಿದು ಕೋಣೆಯೊಳಗೆ ಹೋಗು" ಎಂದಳು.

ಖಾತೂನ್ ಕೆಳಗಿಳಿದು ಒಳಗೆ ಹೋದಳು. ದಿಲ್ಲೈಲಾ ಅವಳ ಹಿಂದೆಯೇ ಎರಡು ಮೂಟೆ ಗಳನ್ನೂ ಹಿಡಿದುಕೊಂಡು ಕೆಳಗಿಳಿದು, ನೇರಾಗಿ ಬೀದಿಗಿಳಿದು ಬಹು ವೇಗವಾಗಿ ಹೋಗಿಬಿಟ್ಟಳು.

ಖಾತೂನ್ ಕೆಳಗಿನ ಕೋಣೆಯೊಳಗೆ ಹೋಗಿ ನೋಡಿದಳು. ಅವಳಿಗೆ ಅಲ್ಲಿ ಎಲ್ಲಿಯೂ ಸಾಧು ಕಾಣ ಲಿಲ್ಲ. ಆದರೆ ಅಂಗಿಯಿಲ್ಲದೆ ಬರಿ ಮೈಯಲ್ಲಿ ಕುಳಿತಿದ್ದ ಮೊಹಿಸಿನನನ್ನು ನೋಡಿದಳು. "ನೋಡಿಕೋ! ನನ್ನ ಶರೀರದಲ್ಲಿ ಮಚ್ಚೆಗಿಚ್ಚೆ ಏನಾದರೂ ಇದೆಯೇ ಅಂತ ಚೆನ್ನಾಗಿ ನೋಡಿಬಿಡು, ಸಂದೇಹವಿರಬಾರದು!" ಎಂದನು ಅವಳನ್ನು ನೋಡಿದ ಕೂಡಲೇ ಮೊಹಿಸಿನ್.

ಖಾತೂನ್ ಹೆದರಿಬಿದ್ದು, ಸರಕ್ಕನೆ ತಿರುಗಿ ಉಪ್ಪರಿಗೆಯ ಮೇಲೆ ಓಡುತ್ತಾ ಹೋಗಿ, ಬಾಗಿಲು ಹಾಕಿ ಒಳಗೆ ಚಿಲುಕ ಸೇರಿಸಿದಳು. ಅಲ್ಲೆಲ್ಲಿಯೂ ಅವಳಿಗೆ ಸೂಫೀ ಸನ್ಯಾಸಿನಿಯಾಗಲೀ, ತನ್ನ ನಗ ಗಳ ಮೂಟೆಯಾಗಲೀ ಕಾಣಲಿಲ್ಲ.

ದಿಲ್ಲೈಲಾ ತಾನು ವಶಪಡಿಸಿಕೊಂಡ ಮೂಟೆಗಳನ್ನು ತನಗೆ ಪರಿಚಯದವಿದ್ದ ಒಂದು ಅಂಗಡಿಯಲ್ಲಿಟ್ಟು, ರಂಗಾರಿಯ ಅಂಗಡಿಗೆ ಹೋದಳು.

"ಅಯ್ಯಾ, ನೀವು ಕೊಡಿಸಿದ ಮನೆ ನಮಗೆ ಚೆನ್ನಾಗಿ ಹಿಡಿಸಿದೆ. ಸೌಖ್ಯವಾಗಿದೆ. ನೀವು ತುಂಬಾ ಪುಣ್ಯ ಕಟ್ಟಿಕೊಂಡಿರಿ. ಮಕ್ಕಳಿಬ್ಬರೂ ಬಹಳ ಹಸಿವೆ ಅನ್ನುತಿದ್ದಾವೆ. ನೀವು ಅವರಿಗೆ ಸ್ವಲ್ಪ ತಿನ್ನಲು ಏನಾದರೂ ಒಯ್ದು ಕೊಡುವಿರಾ? ಒಂದು ದೀನಾರ ಇಟ್ಟುಕೊಳ್ಳಿ. ನೀವು ಕೂಡಾ ಅವರೊಂದಿಗೆ ಜತೆಗಿದ್ದು ಫಲಾರ ಮಾಡಿರಿ. ನಾನು ಮನೆಗೆ ಹೋಗಿ ಸಾಮಾನು ಎಲ್ಲಾ ಸಾಗಿಸಿಕೊಂಡು ಬರುತ್ತೇನೆ" ಎಂದಳು ದಿಲ್ಲೈಲಾ. (ಇನ್ನೂ ಇದೆ)





# ಇಬ್ಬರು ಮೋಸಗಾತಿಯರು

೨

ದಿಲ್ಲೈಲಾ ಹೇಳಿದಂತೆ ಹಾಜ್ ಮುಹಮ್ಮದನು ತನ್ನ ಅಂಗಡಿಯನ್ನು ನೋಡಿಕೊಂಡಿರುವಂತೆ ಕೆಲಸದವನಿಗೆ ಹೇಳಿ, ಅಲ್ಲಿಂದ ಹೊರಟನು.

ಆ ಸಮಯದಲ್ಲಿ ದಿಲ್ಲೈಲಾ ತಾನು ಮೂಟೆಯನ್ನಿಟ್ಟಿದ್ದ ಅಂಗಡಿಗೆ ಹೋಗಿ, ತನ್ನ ಮೂಟೆಯನ್ನು ತೆಗೆದುಕೊಂಡು ಮತ್ತೆ ಹಾಜ್ ಮುಹಮ್ಮದನ ಅಂಗಡಿಗೇ ಬಂದು, ಅಲ್ಲಿದ್ದ ಕೆಲಸದವನೊಂದಿಗೆ, "ನಿನ್ನ ಯಜಮಾನ್ರು ರೊಟ್ಟಿಯಂಗಡಿಯಲ್ಲಿದ್ದಾರಪ್ಪ. ನಿನ್ನನ್ನು ಈಗಲೇ ಅಲ್ಲಿಗೆ ಬರಲಿಕ್ಕೆ ಹೇಳಿದ್ದಾರೆ. ಹೋಗಪ್ಪ. ನೀನು ಮತ್ತೆ ಬರುವವರೆಗೆ ನಾನು ಅಂಗಡಿ ನೋಡಿಕೊಳ್ಳುತ್ತೇನೆ" ಎಂದಳು. ಅವಳನ್ನು ಈ ಮೊದಲೇ ನೋಡಿದ್ದ ಕೆಲಸದವನು ಅಂಗಡಿಯನ್ನು ಬಿಟ್ಟು ಹೊರಟುಹೋದನು.

ಆ ಕೂಡಲೇ ದಿಲ್ಲೈಲಾ ಅಂಗಡಿಯೊಳಗಿರುವ ಸಾಮಾನುಗಳಲ್ಲಿ ಎತ್ತಿಕೊಳ್ಳಲು ಸಾಧ್ಯವಾದುವುಗಳನ್ನೆಲ್ಲಾ ಆರಿಸಿ ಒಂದು ಬದಿಯಲ್ಲಿಟ್ಟಳು, ಅಂಗಡಿಯ ಮುಂದೆ ಹೇಸರಗತ್ತೆಯನ್ನು ಸಾಗಿಸಿಕೊಂಡು ಹೋಗುವ ಒಬ್ಬ ಹುಡುಗನನ್ನು ಕರೆದು, "ಅಪ್ಪಾ, ನಿನಗೆ ಈ ಅಂಗಡಿ ಯಜಮಾನ ಗೊತ್ತುತಾನೆ? ಅವನು ನನ್ನ ಮಗನೇ. ಅವನನ್ನು ಸಾಲಗಾರ್ರು ಬಂದು ಎಳೆದುಕೊಂಡು ಹೋಗಿಬಿಟ್ಟರು. ಇದೆಲ್ಲಾ ಊರವರ ಸಾಮಾನು. ಸಾಲದವರು ಎತ್ತಿಕೊಂಡು ಹೋದಾರು ಅಂತ ಭಯವಾಗಿದೆ. ಇವುಗಳನ್ನೆಲ್ಲಾ ನಿನ್ನ ಕತ್ತೆಯ ಮೇಲೆ ನನ್ನ ಮನೇವರೆಗೆ ಸಾಗಿಸಿಕೊಳ್ಳುತ್ತೇನೆ. ಇಕೋ ಒಂದು ದೀನಾರ ತೆಗೆದುಕೋ, ನಾನು ಮತ್ತೆ ಬರುವವರೆಗೆ ನೀನು ಈ ಅಂಗಡಿಯಲ್ಲಿರುವ ನೀಲೀ ದ್ರಾವಕದ ಸೀಸೆಗಳನ್ನೂ, ಮರದ ಸಾಮಾನುಗಳನ್ನೂ ಮುರಿದು ಹಾಳುಮಾಡಿಬಿಡು. ಸಾಲದವರು ಎಲ್ಲಾ ಜಪ್ತಿಮಾಡಿಕೊಂಡು ಹೋದಾರು. ಸಾವಕಾಶವಾಗಿ ಸಾಲ ತೀರಿಸುತ್ತೇವೆಂದರೆ ಹೀಗೆಲ್ಲಾ ಬಲವಂತ ಮಾಡುತ್ತಾರೆ!" ಅವರಿಗೇನೂ ಸಿಗದಂತೆ ಮಾಡಬೇಕು ಎಂದಳು.

ಕತ್ತೆಯ ಹುಡುಗನು ಹಾಗೆಯೇ ಮಾಡಲು ಒಪ್ಪಿದನು. ದಿಲ್ಲೈಲಾ ಸಾಮಾನುಗಳನ್ನೆಲ್ಲಾ ಕತ್ತೆಯ ಮೇಲೆ ಹಾಕಿ, ಅದನ್ನು ಸಾಗಿಸಿಕೊಂಡು ಹಿಂದಿರುಗಿ ನೋಡದೆ ತನ್ನ ಮನೆಗೆ ಹೋದಳು. ತಾಯಿಯನ್ನು



ನೋಡಿದ ಕೂಡಲೇ ಮಗಳು ಜೀನಾಬ್, "ಏನು ಮಾಡಿಕೊಂಡು ಬಂದೆಯಮ್ಮಾ? ಅಪಾಯ ವೇನೂ ಇಲ್ಲವಷ್ಟೆ?" ಎಂದು ಆತುರದಿಂದ ಕೇಳಿದಳು.

"ಹಾಗೇನಿಲ್ಲಮ್ಮ! ನಾಲ್ಕು ಮಂದೀ ಕಣ್ಣಿಗೆ ಧೂಳು ಹಾಕಿಬಿಟ್ಟೆನು. ಇದಿಷ್ಟೂ ಒಬ್ಬ ಅಧಿಕಾರಿಯ ಹೆಂಡತಿಯ ನಗಗಳು. ಇವು ಒಬ್ಬ ಅಂಗಡಿಗಾರನ ಅಂಗೀ ಚೀಲಹಣ. ಇವೆಲ್ಲಾ ರಂಗಾರೀ ವರ್ತಕನ ಸಾಮಾನುಗಳು. ಈ ಕತ್ತೆ ನಾಲ್ಕನೇಯವನದು!" ಎಂದಳು ದಿಲ್ಲೈಲಾ ಹೆಮ್ಮೆಯಿಂದ ನಗುತ್ತಾ.

"ಚೆನ್ನಾಗೇ ಇದೆ ಅಮ್ಮಾ! ಇನ್ನು ಮನೆಬಿಟ್ಟು ಕದಲಬೇಡ. ಆ ನಾಲ್ವರೂ ಊರೊಳಗೆಲ್ಲಾ ತಿರುಗುತ್ತಾ ನಿನ್ನನ್ನು ಹುಡುಕಿ ಕೊಂಡಿದ್ದಾರು!" ಎಂದಳು ಜೀನಾಬ್.

"ಹುಚ್ಚೀ! ನನ್ನನ್ನು ಏನಂದುಕೊಂಡೆ! ಇನ್ನೂ ನನ್ನ ಕೆಲಸ ಸಾಸಿವೆಯು ಅರ್ಧದಷ್ಟೂ ಆಗಿಲ್ಲ!" ಎಂದಳು ದಿಲ್ಲೈಲಾ.

ಆಗ ಅತ್ತ ರಂಗಾರೀ ವರ್ತಕನು ರೊಟ್ಟಿಯ ಅಂಗಡಿಯಲ್ಲಿ ತಿಂಡಿಗಳನ್ನು ಕೊಂಡು ಕೊಂಡು ಕಟ್ಟಿಕೊಳ್ಳುತ್ತಿರುವಾಗ, ಕೆಲಸದವನು ಬಂದು "ಬರಲಿಕ್ಕೆ ಹೇಳಿದಿರಲ್ಲ, ಏಕೆ?" ಎಂದು ಕೇಳಿದನು. ನಾನೆಲ್ಲಿ ಕರೆದೆನೆಂದು ರಂಗಾರೀ ಅವನ ಮೇಲೆ ಕೋಪಿಸಿ, ಅನುಮಾನಗೊಂಡು ಬೇಗ ಬೇಗನೆ ತನ್ನ ಅಂಗಡಿಗೆ ಹಿಂದಿರುಗಿದನು. ಅಲ್ಲಿ ಕತ್ತೆಯ ಹುಡುಗನು ಅಂಗಡಿಯನ್ನೆಲ್ಲಾ ಧ್ವಂಸಮಾಡುವುದನ್ನು ನೋಡಿ ಗಾಬರಿಯಾಗಿ "ಯಾರೋ ನೀನು? ಏನು ಕೆಲಸವಿದು? ನಿನ್ನನ್ನು ಹೊಂಡದೊಳಗೆ ಹುಗಿಯಾ!" ಎಂದು ಕೂಗಾಡಿದನು ರಂಗಾರೀ.

"ನಿಮ್ಮನ್ನು ಸಾಲದವರು ಬಿಟ್ಟರಷ್ಟೇ? ನಿಮ್ಮ ಅಮ್ಮ ಎಲ್ಲಾ ಹೇಳಿದರು!" ಎಂದು ಆ ಹುಡುಗ ಹೇಳಿದ. ಅವರಿಬ್ಬರೂ ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳಲಿಕ್ಕೆ ಸ್ವಲ್ಪ ಹೊತ್ತೇ ಹಿಡಿಯಿತು. ಕಡೆಗೆ "ಎಲ್ಲಿ ಆ ಮುದುಕಿ?" ಎಂದು ರಂಗಾರೀ ವರ್ತಕನೂ, "ನನ್ನ ಕತ್ತೆ ಏನಾಯಿತು?" ಎಂದು ಕತ್ತೆಯ ಹುಡುಗನೂ ಲಬಲಬನೆ ಬಡೆದುಕೊಂಡರು. ಸುತ್ತಲೂ ಅನೇಕ ಮಂದಿ ಕೂಡಿದರು. ಆಮೇಲೆ ಎಲ್ಲರೂ ಕೂಡಿ ರಂಗಾರೀ ವರ್ತಕನ ಮನೆಯ ಕಡೆಗೆ ಸಾಗಿದರು.

ರಂಗಾರೀ ತನ್ನ ಮನೆಯ ಕೆಳಗಿನ ಭಾಗದ ಬಾಗಿಲು ತಟ್ಟಲು, ಅಂಗಿ ಇಲ್ಲದೆ ಬರಿ ಮೈಯಿಂದಿದ್ದ ಮೊಹಸಿನ್ ಬಾಗಿಲು ತೆರೆದನು. "ಇರುವೆಯಾ? ಕಳ್ಳ ಭಡವಾ! ನಿನ್ನ ಅಮ್ಮ ಎಲ್ಲಿಯೋ?" ಎಂದು ರಂಗಾರೀ ಅರಚಿದನು. "ನನ್ನ ಅಮ್ಮ ಸತ್ತು ಬಹಳ ವರ್ಷ ಆಯಿತಲ್ಲ?" ಎಂದ ಮೊಹಸಿನ್. ಅವರಿಬ್ಬರೂ ತಗಾದೆ ತೆಗೆದು ಅರ್ಥಮಾಡಿಕೊಳ್ಳಲಿಕ್ಕೆ ಮತ್ತಿಷ್ಟು ಹೊತ್ತಾಯಿತು. ಕಡೆಗೆ ಮೊಹಸಿನ್, "ಆ ಮುದುಕಿ ತನ್ನ ಮಗಳನ್ನು ನನಗೆ ಮದುವೆ ಮಾಡಿಕೊಡುವೆ



ನೆಂದು ಕರೆದುಕೊಂಡು ಬಂದಳು. ಅವರು ಮಾಳಿಗೆಯಲ್ಲೇ ಇದ್ದಾರೆ !" ಎಂದನು.

ರಂಗಾರೀ ಮಾಳಿಗೆಯ ಮೆಟ್ಟಿಲು ಹತ್ತಿ ಹೋಗಿ ಬಾಗಿಲು ತಟ್ಟಲು ಖಾತೂನ್ ಬಾಗಿಲು ತೆರೆದು, "ಎಲ್ಲಿ ಹೋದೆ ಸನ್ಯಾಸಿಯಮ್ಮಾ !" ಎಂದು ಗಾಬರಿಯಾದಳು. "ಯಾವ ಸನ್ಯಾಸಿಯಮ್ಮ ? ನಿನ್ನ ಅಮ್ಮ ಎಲ್ಲಿ ?" ಎಂದು ಕೇಳಿದ ರಂಗಾರೀ ವರ್ತಕ. "ನನ್ನ ಅಮ್ಮ ಹೋಗಿ ಎಷ್ಟು ಕಾಲವಾಯಿತೋ !" ಎಂದಳು ಖಾತೂನ್.

ಇಲ್ಲಿಯೂ ಗುಂಪು ಸೇರಿತು. ಒಬ್ಬರಿಂದೊಬ್ಬರು ಮಾತಾಡಿಕೊಂಡ ಮೇಲೆ ಮೋಸವು ಹೇಗೆ ನಡೆಯಿತೆಂಬುದು ಗೊತ್ತಾಯಿತು. ಖಾತೂನಳನ್ನು ಅವಳ ಮನೆಗೆ ಕಳುಹಿಸಿಕೊಟ್ಟು, ಉಳಿದ ಮೂವರೂ ನಗರ ರಕ್ಷಕನಾದ ಖಾಲೀದನ ಬಳಿಗೆ ಹೋಗಿ ನಡೆದ ಸಂಗತಿಯನ್ನೆಲ್ಲಾ ಹೇಳಿಕೊಂಡರು. ಖಾಲೀದ್ ಆಶ್ಚರ್ಯದಿಂದ ಅವರು ಹೇಳಿದ ಸಮಾಚಾರವನ್ನೆಲ್ಲಾ ಕೇಳಿ, "ಈ ಮಹಾ ನಗರದಲ್ಲಿರುವ ಸಾವಿರಾರು ಮುದುಕಿಯರಲ್ಲಿ ನಿಮ್ಮನ್ನು ಮೋಸಪಡಿಸಿದವಳನ್ನು ಹೇಗೆ ಹಿಡಿಯುವುದು ? ಒಂದು ಮಾಡಿ. ನೀವೇ ಹೇಗಾದರೂ ಶ್ರಮಪಟ್ಟು ಅವಳನ್ನು ಹಿಡಿದು ತನ್ನಿ. ನಾನು ಖಂಡಿತವಾಗಿ ಶಿಕ್ಷಿಸಿ ಬಿಡುತ್ತೇನೆ" ಎಂದನು.

ಬೇರೆ ಉಪಾಯ ಕಾಣದೆ ಮೋಸ ಹೋದ ಮೂವರೂ ಮುದುಕಿಯನ್ನು ಹುಡುಕುತ್ತಾ ಮೂರು ದಿಕ್ಕುಗಳಿಗೆ ಹೊರಟರು.

ಇಷ್ಟರಲ್ಲಿ ದಿಲ್ಲೈಲಾ ತಾನು ಧರಿಸಿಕೊಂಡ ಸೂಫೀ ಸಂನ್ಯಾಸಿನೀ ವೇಷವನ್ನು ಪೂರ್ತಿಬಿಟ್ಟು, ಶ್ರೀಮಂತರೊಬ್ಬರ ಮನೆಯ ಕೆಲಸದವಳ ಹಾಗೆ ವೇಷ ಬದಲಾಯಿಸಿಕೊಂಡಳು. ಹೀಗೆ ಸಿದ್ಧಳಾಗಿ ತನ್ನ ಪ್ರತಾಪದಿಂದ ಬಾಗ್ದಾದಿನ ಪೌರರನ್ನು ಹುರಿದು ಮುಕ್ಕಲಿಕ್ಕಾಗಿ ಮತ್ತೆ ಹೊರಟಳು. ಅವಳು ಒಂದು ಚಿಕ್ಕ ಸಂದು ಬೀದಿಯಲ್ಲಿ ಹೋಗುತ್ತಿದ್ದಾಗ, ಒಂದು ಮನೆಯಲ್ಲಿ ಏನೋ ವೈಭವ ನಡೆಯುತ್ತಿತ್ತು.

ಒಳಗೆ ದಿಂಬು, ಜಮಖಾನೆಗಳನ್ನು ಓರಣವಾಗಿ ಅಲಂಕರಿಸಿದ್ದರು. ಮೇಳತಾಳಗಳೂ ದೀಪಗಳೂ, ಹಾಡುಗಳೂ, ವಿನೋದ ಕೋಲಾಹಲಗಳೂ ಕಾಣುತ್ತಿದ್ದುವು. ಮನೆಯ ಹೆಬ್ಬಾಗಿಲಲ್ಲಿ ಗುಲಾಮಿಯೊಬ್ಬಳು ಚಿಕ್ಕ ಹುಡುಗನನ್ನು ಕಂಕುಳಲ್ಲಿಟ್ಟು ಕೊಂಡಿದ್ದಳು. ಆ ಕಂದನ ಶರೀರದಲ್ಲಿ ಬಂಗಾರದ ಜರಿಗಳ ಪೋಷಾಕುಗಳಿದ್ದುವು. ರತ್ನಖಚಿತ ಆಭರಣಗಳೂ, ಮುತ್ತಿನ ಗೊಂಡೆಯ ಟೊಪ್ಪಿಯೂ ಹುಡುಗನನ್ನು ಅಲಂಕರಿಸಿದ್ದುವು. ಅವನು ಆ ಮನೆಯವರ ಮಗನೇ ನಿಜ.

ಆ ಮನೆಯ ಒಡೆಯ ಬಾಗ್ದಾದಿನಲ್ಲಿ ವ್ಯಾಪಾರಿಗಳಿಗೆಲ್ಲಾ ಹಿರಿಯನಾಗಿದ್ದನು. ಆ ದಿನ ಅವನ ಕುಮಾರಿಗೆ ಶುಭ ಸಮಾರಂಭವೇನೋ ನಡೆಯು



ತಿದ್ದಿತು. ವರ್ತಕ ಶ್ರೇಷ್ಠನ ಹೆಂಡತಿ ಬಂದವರಿಗೆ ಉಪಚರಿಸಲು ಬಿಡದೆ ಚಿಕ್ಕ ಮಗ ಅವಳನ್ನು ಹಿಡಿದು ಹಟ ಮಾಡಿಕೊಂಡಿದ್ದುದರಿಂದ ಅವಳು ಅವನನ್ನು ಗುಲಾಮೀ ಸೇವಕಿಯ ಕೈಗೆ ಕೊಟ್ಟು, ಬಂದವರು ಹೋಗುವವರೆಗೆ ಆಡಿಸಿಕೊಂಡಿರಲು ಹೇಳಿದ್ದಳು. ಈ ಸಂಗತಿಯನ್ನೆಲ್ಲ ದಿಲ್ಲೈಲಾ ಬೀದಿಯಲ್ಲಿ ನಿಂತೇ ಕಂಡು ಹಿಡಿದಳು. ಆ ಹುಡುಗನ ಶರೀರದ ಮೇಲಿದ್ದ ಸಂಪತ್ತನ್ನು ಅಪಹರಿಸಬೇಕೆಂದು ಅವಳಿಗೆ ದುರ್ಬುದ್ಧಿ ಹುಟ್ಟಿತು.

ದಿಲ್ಲೈಲಾ ಜನರ ಗುಂಪನ್ನು ತಳ್ಳಿಕೊಂಡು ಹೆಬ್ಬಾಗಿಲ ಬಳಿಗೆ ಬರುತ್ತಾ, "ಅಮ್ಮಮ್ಮ! ನನ್ನನೇ ಕೆಲ್ಸಕ್ಕೆ ಮಣ್ಣು ಹಾಕ! ಬರುವಾಗ ಹೊತ್ತಾಗೇ ಹೋಯ್ತು" ಎಂದು ಗಟ್ಟಿಯಾಗಿಯೇ ಹೇಳಿದಳು. ತರುವಾಯ ಒಂದು ನಡೆಯದ ನಾಣ್ಯವನ್ನು ತೆಗೆದು ಆ ಗುಲಾಮೀ ದಾಸಿಯ ಕೈಯಲ್ಲಿಟ್ಟು, "ನಿಮ್ಮ ಹಳೇ ದಾಸಿ ಕಣೇ ನಾನು! ಇಂಥಾ ಶುಭ ಕಾರ್ಯಕ್ಕೆ ಬಾರದಿದ್ರೆ ಆಗುತ್ತೆಯೆ? ಹಳೇ ದಾಸಿ ಉಮ್ಮಾಲ್‌ಖಯರ್ ಸಲಾಮು ಹೇಳಲು ಬಂದಿದ್ದಾಳೆ ಅಂತ ಅಮ್ಮಾವರ ಹತ್ತಿರ ಹೇಳಿ ಬಾ ತಾಯಿ!" ಎಂದಳು. ಗುಲಾಮಿ ಆ ನಾಣ್ಯವನ್ನು ಪಡೆದುಕೊಂಡು "ಈ ಹುಡುಗ ಅಮ್ಮನ್ನ ಕಂಡರೆ ಸಾಕು ಸೆರಗು ಹಿಡಿದು ಮತ್ತೆ ಬಿಡದೆ ಹಟ ಮಾಡುತ್ತಾನಲ್ಲಾ? ನಾನು ಹೇಗೆ ಹೋಗಲಮ್ಮಾ?" ಎಂದಳು. "ನೀನು ಬರುವವರೆಗೆ ನಾನು ಇವನನ್ನು ಎತ್ತಿಕೊಳ್ತೇನೆ ಬಿಡು!" ಎಂದು ದಿಲ್ಲೈಲಾ "ಬಾರೋ ನನ್ ಬಂಗಾರು ಕಂದ! ನಾನು ನಿನ್ನಜ್ಜಿ ಕಣೋ!" ಎಂದು ಕೈ ಚಾಚಿದಳು.

ಗುಲಾಮೀದಾಸಿ ಅವಳ ಮಾತನ್ನು ನಂಬಿ ಹುಡುಗನನ್ನು ದಿಲ್ಲೈಲಾಳ ವಶಕ್ಕೆ ಕೊಟ್ಟು ಒಳಗೆ ಹೋದಳು.

ಕೂಡಲೇ ದಿಲ್ಲೈಲಾ ಹುಡುಗನನ್ನು ಮಂಗಾಡಿ ಸುತ್ತ ಎತ್ತಿಕೊಂಡು ನಿರ್ಜನವಾದೊಂದು ಮೂಲೆಗೆ ಹೋಗಿ ಅವನ ಮೈಮೇಲಿನ ಬೆಲೆ ಬಾಳುವ ನಗಗಳನ್ನೂ, ಜರಿ ಬಟ್ಟೆಗಳನ್ನೂ ಸುಲಿದುಕೊಂಡಳು. ತರುವಾಯ ಆ ಹುಡುಗನನ್ನು ಎತ್ತಿಕೊಂಡು ಸರಾಫ ಅಂಗಡಿಗೆ ಹೋದಳು. ಅಲ್ಲಿಯ ವರ್ತಕನು ವರ್ತಕ ಶ್ರೇಷ್ಠನ ಕುಮಾರನ ಗುರುತು ಹಿಡಿದು, "ಏನಮ್ಮಾ? ನಿಮ್ಮ ಯಜಮಾನರಿಗೆ ಏನಾಗಬೇಕಂತೆ?" ಎಂದು ದಿಲ್ಲೈಲಾಳನ್ನು ಕೇಳಿದನು.

"ಈ ಹುಡುಗನ ಅಕ್ಕನಿಗೆ ಶೋಭನ ನಡೆಯುತ್ತದಪ್ಪೆ? ಈಗ ಒಂದು ಜತೆ ಬಂಗಾರದ ಬಳೆಗಳು, ಎರಡು ಜತೆ ಬಂಗಾರದ ವಂಕಿಗಳು, ಒಂದು ಜತೆ ಮುತ್ತಿನ ಬೆಂಡೋಲೆ, ಗಿಣಿಚಿತ್ರದ ವಡ್ಯಾಣ ಬೇಕಂತೆ. ಮೊತ್ತ ಸಾವಿರ ದಿನಾರಗಳಿಗೆ ಕಡಿಮೆಯಾಗದಂತೆ ನೋಡಿಕೊಂಡರೆ ಸರಿ. ಒಡವೆಗಳನ್ನು ಒಯ್ದು ಅಮ್ಮಾವರಿಗೆ ತೋರಿಸಿ ಹಿಡಿಸಿದರೆ ಹಣ ತೆಗೆದುಕೊಂಡು ಈಗಲೇ ಬರುತ್ತೇನೆ, ಅದುವರೆಗೆ ಬೇಕಾದರೆ ಈ ಹುಡುಗ ಇಲ್ಲಿರುತ್ತಾನಂತೆ. ಏನೋ!

ನನ್‌ರಾಜಾ ! ಇಲ್ಲಿರ್ತ್ಯಾ ?" ಎಂದಳು ದಿಲ್ಲೈಲಾ. "ಹಾಗೇ ಕೊಡುತ್ತೇನೆ. ಅದಕ್ಕಾಗಿ ಕುಮಾರನ್ನ ಇಲ್ಲಿ ಬಿಡುವುದೇನೂ ಬೇಡ" ಎಂದ ರತ್ನವರ್ತಕ. ದಿಲ್ಲೈಲಾ ಅಲ್ಲಿ ಸಿಕ್ಕಿದುದನ್ನೆಲ್ಲಾ ತೆಗೆದುಕೊಂಡು, ಹುಡುಗನನ್ನು ಅಂಗಡಿಯ ಹತ್ತಿರ ಕೆಳಗಿಳಿಸಿ, ಸೀದಾ ತನ್ನ ಮನೆಗೆ ಹೋದಳು.

ವರ್ತಕನ ಮನೆಯಲ್ಲಿ ಸಂತೋಷ ಸಮಾರಂಭವು ಶೋಕಸಮುದ್ರವಾಗಿ ಮಾರ್ಪಟ್ಟಿತು. ವರ್ತಕನ ಪತ್ನಿ ಮಗನನ್ನು ಕಾಣದೆ, ಅಡಿ ಮೇಲು ಮಾಡಿ ಅಳುತ್ತಿದ್ದಳು. ಹುಡುಗನ ಜಾಡು ಯಾರಿಗೂ ಗೊತ್ತಾಗಲಿಲ್ಲ. ವರ್ತಕನು ಬಹಳ ಹೊತ್ತು ಹುಡುಕಿದ ಮೇಲೆ ರತ್ನವರ್ತಕನ ಸರಾಫ ಅಂಗಡಿಯ ಹತ್ತಿರ ಹುಡುಗ ಸಿಕ್ಕಿದ.

ವರ್ತಕಶ್ರೇಷ್ಠನು ಅಂಗಡಿಯವನನ್ನು ಬಯ್ಯುತ್ತ "ನನ್ನ ಮಗನನ್ನು ಇಲ್ಲಿಗೆ ತಂದು ಹಾಗೇಕೆ ಬಿಟ್ಟಿರುವೆ ? ಅವನ ಮೈಮೇಲಿದ್ದ ನಗಗಳೂ ದುಸ್ತುಗಳೂ ಏನಾದುವು ?" ಎಂದನು.

"ಇಲ್ಲಿ ಬಿಡಬೇಕಾಗಿಲ್ಲ ಅಂದೆನಲ್ಲಾ ? ನಿಮ್ಮ ದಾಸಿ ನಿಮ್ಮ ಪತ್ನೀ ಸಾಹೇಬರಿಗೆ ತೋರಿಸಿಬರಲು ಸಾವಿರ ದೀನಾರಗಳ ನಗಗಳನ್ನು ಒಯ್ದಳು. ಅವಳನ್ನು ಕೇಳಿರಿ" ಎಂದ ಅಂಗಡಿಯ ವರ್ತಕ. ಇಬ್ಬರೂ ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳಲು ಸ್ವಲ್ಪ ವೇಳೆ ಹಿಡಿಯಿತು. ಆ ಸಮಯಕ್ಕೆ ದಿಲ್ಲೈಲಾಳಿಂದ ಮೋಸ ಹೋದ ಮೊದಲನೇ ಮೂವರೂ ಅಲ್ಲಿಗೆ ಬಂದರು. ಎಲ್ಲರನ್ನೂ ಮೋಸ ಪಡಿಸಿದವಳು ಒಬ್ಬಳೇ ಮುದುಕಿ ಎಂದು ಸ್ಪಷ್ಟವಾಗಿ ಹೋಯಿತು. ಒಬ್ಬರ ಕಥೆ ಒಬ್ಬರೊಡನೆ ಹೇಳಿಕೊಂಡಾಗ ಎಲ್ಲವೂ ಬೆಳಕಿಗೆ ಬಂತು.

"ಈ ಮುದಿ ಹೆಣದವಳ ಭೂತಕ್ಕೆ ಅಂತ್ಯ ಕಾಣಿಸದೆ ನಾನು ನಿದ್ದೆ ಮಾಡಲಾರೆ" ಎಂದು ವರ್ತಕ ಶ್ರೇಷ್ಠನು ಶಪಥ ಹಾಕಿಕೊಂಡನು. ರತ್ನವರ್ತಕನು ಉಳಿದ ಮೂವರೊಂದಿಗೆ, "ನಿಮ್ಮೊಂದಿಗೆ ನಾನು ಕೂಡಾ ಆ ಮುದುಕೀನ ಹಿಡಿಯಲು ಬರುತ್ತೇನೆ. ಆದರೆ ಎಲ್ಲರೂ ಕೂಡಿ ಹೋಗುವುದರಿಂದ ಲಾಭ ವಿಲ್ಲ. ನಾವು ಬೇರೆ ಬೇರೆ ದಾರಿಯಲ್ಲೇ ಶೋಧನೆ ನಡೆಸಬೇಕು. ಮಧ್ಯಾಹ್ನದಲ್ಲಿ ಎಲ್ಲರೂ ಹಜ್ ಮಸೂದ್ ಎಂಬ ಹಜಾಮನ ಅಂಗಡೀ ಹತ್ತಿರ ಕಲೆತುಕೊಳ್ಳೋಣ" ಎಂದನು.

ಮಧ್ಯಾಹ್ನದ ಹೊತ್ತಿಗೆ ಕತ್ತೆಯ ಹುಡುಗನು ಮಸೂದ್ ಹಜಾಮನ ಅಂಗಡಿಯ ಹತ್ತಿರ ಬರುತ್ತಿದ್ದಾಗ, ದಿಲ್ಲೈಲಾ ಅವನ ಕಣ್ಣಿಗೆ ಬಿದ್ದಳು. ಅವಳು ವೇಷ ಬದಲಾಯಿಸಿಕೊಂಡಿದ್ದರೂ ಅವನು ಅವಳನ್ನು ಗುರುತಿಸಿ, "ಸಿಕ್ಕಿದೆಯಾ ಕಳ್ಳಮುದುಕೀ !" ಎಂದು ಅರಚಿದನು. (ಇನ್ನೂ ಇದೆ)






೩

ತನ್ನ ಗುರುತನ್ನು ಕತ್ತೆಯ ಹುಡುಗನು ತಿಳಿದನೆಂದು ತಿಳಿದರೂ ದಿಲ್ಲೈಲಾ ಸ್ವಲ್ಪ ಕೂಡಾ ಹೆದರಲಿಲ್ಲ. ಅವಳು ಅವನನ್ನು ಪರೀಕ್ಷಿಸುವಂತೆ ನೋಡುತ್ತಾ "ನೀನು ಏನು ಹೇಳುವೆಯಪ್ಪಾ ?" ಎಂದು ಏನೂ ಅರಿಯದವಳಂತೆ ಕೇಳಿದಳು.

"ಮೊದಲು ನನ್ನ ಕತ್ತೆಯನ್ನು ನನಗೆ ಕೊಟ್ಟು ಆಮೇಲೆ ಮಾತಾಡು, ಕಳ್ಳ ಮೋಸದ ಮುದುಕೀ !" ಎಂದನು ಹಲ್ಲು ಕಡಿಯುತ್ತ ಕತ್ತೆಯ ಹುಡುಗ.

"ಏನಾಯಿತಪ್ಪಾ ಹಾಗೆ ಕೂಗಲಿಕ್ಕೆ ? ನಿನ್ನ ಕತ್ತೆಯನ್ನು ನಾನು ಎತ್ತಿಕೊಂಡು ಹೋದೆನೆನ್ನುವಿಯಾ? ಹಜಾಮ ಮಸೂದನಲ್ಲಿ ಭದ್ರವಾಗಿದೆ ನಿನ್ನ ಕತ್ತೆ. ನನ್ನ ಜತೆ ಬಾರಪ್ಪ. ನಿನ್ನ ಕತ್ತೆ ಕೊಡಿಸುತ್ತೇನೆ" ಎಂದಳು ದಿಲ್ಲೈಲಾ.

ಕತ್ತೆಯ ಹುಡುಗ ಅವಳ ಹಿಂದೆಯೇ ಹೋದನು. ಕ್ಷೌರದಂಗಡಿಯ ಮುಂದೆ ಆ ಹುಡುಗನನ್ನು ಸ್ವಲ್ಪ ಇರುವಂತೆ ಹೇಳಿ, ದಿಲ್ಲೈಲಾ ಅಂಗಡಿಯೊಳಗೆ ಹೋಗಿ, ಬಾಡಿದ ಮುಖದಿಂದ ಕಣ್ಣೀರು ತುಂಬಿ ಕೊಂಡವಳಾಗಿ, ಹಜಾಮ ಮಸೂದನೊಂದಿಗೆ, "ನಿನ್ನ ಹೊರತು ಈ ರೋಗ ಗುಣಪಡಿಸುವವರು ಬೇರೆ ಯಾರೂ ಕಾಣದೆ ಬಂದೆನಪ್ಪಾ !" ಎಂದಳು. "ಏನು ದೊಡ್ಡಮ್ಮಾ ? ಏನಾಗಬೇಕು ನಿಮಗೆ ?" ಎಂದು ಕೇಳಿದ ಮಸೂದ್.

"ಅಕೋ ನೋಡಪ್ಪಾ, ಹೊರಗೆ ನಿಂತಿದ್ದಾನೆ ನನ್ನ ಮಗ. ಭಾರೀಜ್ವರ ಬಂದು, ಆಚೆಗೋ ಈಚೆಗೋ ಅಂತ ಆಗಿ, ಗುಣವಾಗಿ ಹೋಯಿತು. ಈಗ ಅವನ ಬುದ್ಧಿಗೆ ಏನೋ ಭ್ರಮೆ ಬಡಿದಿದೆ. ಚಿಕ್ಕ ಹುಡುಗನಾಗಿದ್ದಾಗ ಯಾವಾಗಲೂ ಒಂದು ಕತ್ತೆಯ ಜತೆ ಆಡುತ್ತಾ ಇದ್ದ. ಈಗ ಅದನ್ನೇ ಕನವರಿಸಿ ಕೊಂಡಿದ್ದಾನೆ. ಅವನ ತಲೆಯ ಈ ಹುಚ್ಚನ್ನು ನೀನೇ ಬಿಡಿಸಬೇಕಪ್ಪ !" ಎಂದು ದಿಲ್ಲೈಲಾ, ಅವನ ಕೈಗೊಂದು ಬಂಗಾರದ ದಿನಾರಾ ನಾಣ್ಯ ಹಾಕಿದಳು.

ಕೈಗೆಬಿದ್ದ ಬಂಗಾರದ ನಾಣ್ಯ ನೋಡಿದ ಕೂಡಲೇ ಮಸೂದನು, "ಅದಕ್ಕೇನು ಬಿಡೀ ದೊಡ್ಡಮ್ಮಾ ! ತಲೆ ಬೋಳು ಮಾಡಿ, ನಿಂಬೇರಸವನ್ನಿಷ್ಟು ಮರ್ದನ ಮಾಡುತ್ತೇನೆ ನೋಡಿ ! ಮೂರು ಹೊತ್ತಿನೊಳಗೆ ಹುಚ್ಚು ಇಳಿದು ಹೋಗುತ್ತದೆ" ಎಂದನು.



"ಒಳ್ಳೆಯ ಮಾತಿನಿಂದ ಅವನನ್ನು ಕರೆದು ಚಿಕಿತ್ಸೆ ಮಾಡು. ನಿನ್ನ ಋಣ ಇಟ್ಟುಕೊಳ್ಳಲಾರೆ !" ಎಂದಳು ದಿಲ್ಲೈಲಾ.

ಮಸೂದ್ ಅಂಗಡಿಯ ಹೊರಗೆ ಬಂದು, ಕತ್ತೆಯ ಹುಡುಗನನ್ನು ನೋಡಿ. "ಒಳಗೆ ಬಾರಪ್ಪಾ" ಎಂದು ಕರೆದನು. "ನನ್ನ ಕತ್ತೆ?" ಎಂದು ಹುಡುಗ ಕೇಳಿದ ಕೂಡಲೇ, "ಅದು ನನ್ನ ಹತ್ತಿರವೇ ಇದೆ. ಒಂದು ನಿಮಿಷ ಒಳಗೆಬಾರಪ್ಪ" ಎಂದ ಮಸೂದ್.

ಕತ್ತೆಯಹುಡುಗ ಅಂಗಡಿಯೊಳಗೆ ಪ್ರವೇಶಿಸಿದನು. ಕೂಡಲೇ ಮಸೂದನ ಸನ್ನೆಯಂತೆ ನೌಕರರು ಅವನನ್ನು ಹಿಡಿದು ಕೈಗಳನ್ನು ಬೆನ್ನಿಗೆ ಸೇರಿಸಿ ಕಟ್ಟಿದರು. ಮಸೂದ್ ಅವನ ತಲೆಯನ್ನು ನುಣ್ಣಗೆ ಬೋಳಿಸಿದನು. ಆಮೇಲೆ ನಿಂಬೆರಸವನ್ನು ಅವನ ತಲೆಗೆ ಹಚ್ಚಿ ರುದ್ದತೊಡಗಿದನು. ಹುಡುಗನು ಕೂಗಾಡುತ್ತಿದ್ದರೂ ಯಾರೂ ಲಕ್ಷಿಸಲಿಲ್ಲ.

ಒಂದುಸಾರಿಯ ಚಿಕಿತ್ಸೆ ಮುಗಿದ ಮೇಲೆ ಅವನನ್ನು ಹಾಗೆಯೇ ಕೂಡಿಸಿಟ್ಟು. ಒಳಗೆ ಹೋಗಿ ನೋಡಿ ಗಾಬರಿ ಬಿದ್ದನು. ಅಲ್ಲೆಲ್ಲಿಯೂ ಮುದುಕಿಯ ಜಾಡು ಕಾಣಲಿಲ್ಲ. ಅದುಮಾತ್ರವಲ್ಲದೆ, ಕತ್ತಿ, ಕನ್ನಡಿ, ತೈಲಗಳು, ಪರಿಮಳ ದ್ರವ್ಯಗಳು, ಬೆಲೆ ಬಾಳುವ ಅತ್ತರು, ಮೇಜುಕುರ್ಚಿಗಳು ಸಹಾ ಮಾಯವಾಗಿದ್ದುವು.

ಮಸೂದ್ ಕತ್ತೆಯ ಹುಡುಗನ ಬಳಿಗೆ ಬಂದು, ಅವನ ಕುತ್ತಿಗೆ ಹಿಡಿದು, "ಸೈತಾನ್ ಬಚ್ಚಾ! ಎಲ್ಲಿಯೋ ನಿನ್ನಮ್ಮ ಸೈತಾನ್?" ಎಂದು ಕೇಳಿದ.

"ಎಂದೋ ಸತ್ತು ಪರಲೋಕ ಸೇರಿದ ನನ್ನ ಅಮ್ಮ ಯಾಕೆ ಸೈತಾನ್ ಆದಾಳು? ನನ್ನಕತ್ತೆ ಇದೆ ಅಂದೆ ಯಲ್ಲಾ? ಅದೆಲ್ಲಿದೆ? ಕೊಟ್ಟುನನ್ನನ್ನು ಬಿಟ್ಟುಬಿಡು!" ಎಂದ ಕತ್ತೆಯ ಹುಡುಗ ತಲೆ ಸವರಿಕೊಳ್ಳುತ್ತ.

ಆಗ ಉಳಿದ ನಾಲ್ವರು ಕೂಡಾ ಮೊದಲೇ ಅಂದುಕೊಂಡ ಪ್ರಕಾರ ಹಜಾಮ ಮಸೂದನ ಅಂಗಡಿಗೆ ಬಂದರು. ನಡೆದ ಸಂಗತಿ ಪೂರಾ ತಿಳಿದ ಮೇಲೆ ಆ ಕಳ್ಳ ಮುದುಕಿಯೇ ಮತ್ತೊಂದು ಮೋಸ ಮಾಡಿದ್ದಾಳೆಂದು ಗೊತ್ತಾಯಿತು. ಹಜಾಮ ಮಸೂದನೂ ಅವರೊಂದಿಗೆ ಸೇರಿದನು. ಅವಳನ್ನು ಹುಡುಕಲು ಅವರೆಲ್ಲಾ ಮತ್ತೆ ಹೊರಟರು.

ಅವರು ಅನೇಕ ಬೀದಿಗಳನ್ನು ತಿರುಗಿ ಒಂದು ಕಡೆಗೆ ಬಂದಾಗ, ಕತ್ತೆಯ ಹುಡುಗನಿಗೆ ದಿಲ್ಲೈಲಾ ಮತ್ತೆ ಕಣ್ಣಿಗೆಬಿದ್ದಳು. ಅವನು ಓಡಿ ಹೋಗಿ ಒಮ್ಮೆಗೇ ಅವಳ ಮೇಲೆಬಿದ್ದು ಗಟ್ಟಿಯಾಗಿ ಹಿಡಿದು ಕೊಂಡು, "ಇವಳೇ! ಮುದಿಪಿಶಾಚಿ! ಇನ್ನು ಬಿಡಬಾರದು. ಹಿಡೀರಿ!" ಎಂದು ಕೂಗಿದನು.

ಎಲ್ಲರೂ ಕೂಡಿ ಅವಳನ್ನು ಹಿಡಿದುಕೊಂಡು ಖಾಲೀದನ ಮನೆಗೆ ತೆಗೆದುಕೊಂಡು ಹೋಗಿ, ಅಲ್ಲಿದ್ದ ಭಟರೊಂದಿಗೆ, "ನಮಗೆ ಬೇಗನೇ ಖಾಲೀದ್ ದೊರೆಗಳ ದರ್ಶನವಾಗಬೇಕು." ಎಂದರು. "ಹೀಗೆ ಅವಸರ ಮಾಡಿದರೆ ತಲೆ ಹೋದೀತು.



"ಅವರು ನಿದ್ದೆಯಲ್ಲಿದ್ದಾರೆ. ಏಳುವವರೆಗೆ ಕಾಯಬೇಕು" ಎಂದು ಸೇವಕರು, ಐದುಮಂದಿ ಗಂಡುಸರನ್ನೂ ಹೊರಗಿನ ಅಂಗಳದಲ್ಲಿ ಕುಳ್ಳಿರಿಸಿ, ದಿಲ್ಲೈಲಾಳನ್ನು ಜನಾನಾ ಭಾಗದ ಒಂದು ಕೋಣೆಯೊಳಗೆ ಕಳುಹಿಸಿದರು.

ದಿಲ್ಲೈಲಾ ಆ ಕೋಣೆಯಿಂದ ಇನ್ನೊಂದು ಕೋಣೆಗೆ ಹೋಗಿ, ಹಾಗೆಯೇ ಮತ್ತೆ ಕೆಲವು ಕೋಣೆಗಳನ್ನು ದಾಟಿ, ಮಾಳಿಗೆಯ ಮೇಲೆ ಖಾಲೀದನ ಹೆಂಡತಿ ಇರುವ ಸ್ಥಳಕ್ಕೆ ಹೋದಳು. ಅವಳಿಗೆ ಬಗ್ಗಿ ಸಲಾಂ ಮಾಡಿ, "ಅಮ್ಮ, ನಮ್ಮ ಹತ್ತಿರವಿರುವ ಗುಲಾಮರನ್ನು ನಿಮ್ಮ ಯಜಮಾನರು ಹನ್ನೆರಡು ನೂರು ದೀನಾರಗಳಿಗೆ ಕೊಂಡುಕೊಳ್ಳುವುದಾಗಿ ಮಾತಾಗಿದೆ. ಗುಲಾಮರನ್ನು ಒಪ್ಪಿಸಿಬಿಡೋಣವೆಂದು ಕರಕೊಂಡು ಬಂದೆ. ಯಜಮಾನರು ನಿದ್ದೆಯಿಂದೇಳುವಾಗ ಎಷ್ಟು ಹೊತ್ತಾಗುತ್ತೋ?" ಎಂದಳು.

ಖಾಲೀದನ ಹೆಂಡತಿ, "ಆ ಸಮಾಚಾರ ನಾನು ಹೇಗೆ ಹೇಳಲಿ? ಕೆಲವು ಸಲ ಬೇಗ ಏಳುತ್ತಾರೆ. ಕೆಲವು ಸಲ ತಡವಾಗಿ ಏಳುತ್ತಾರೆ. ಅವರು ಗುಲಾಮರನ್ನು ಕೊಂಡುಕೊಳ್ಳುವ ಸಂಗತಿ ನನ್ನಲ್ಲಿ ಹೇಳಲಿಲ್ಲವಲ್ಲಾ? ಎಲ್ಲಿದ್ದಾರೆ ಆ ಗುಲಾಮರು?" ಎಂದು ಕೇಳಿದಳು.

"ಕೆಳಗೆ ಅಂಗಳದಲ್ಲಿದ್ದಾರೆ. ನಿಮ್ಮ ಭಟರ ಹತ್ತಿರಹೇಳಿ ಕೂಡಿಸಿದ್ದೇನೆ, ಕಿಟಕೀಲಿ ನೋಡಿದರೆ ನಿಮಗೆ ಕಾಣುತ್ತಾರೆ. ಎಲ್ಲರೂ ಒಳ್ಳೇಗಟ್ಟಿ ಮುಟ್ಟಾದವರೇ" ಎಂದಳು ದಿಲ್ಲೈಲಾ.

ಖಾಲೀದನ ಹೆಂಡತಿ ಅಂಗಳದಲ್ಲಿರುವವರನ್ನು ಕಿಟಕಿಯಿಂದ ನೋಡಿ ತೃಪ್ತಿಪಟ್ಟಳು. ಕತ್ತಲಾಗುವುದರೊಳಗೆ ತನ್ನ ಮನೆ ಸೇರಬೇಕಲ್ಲಾ ಎಂದು ದಿಲ್ಲೈಲಾ ಗುಣುಗುಣಿಸುವಾಗ, ಖಾಲೀದನ ಹೆಂಡತಿ, "ಹಣ ನಾನೇ ಕೊಡುತ್ತಿದ್ದೆ. ಆದರೆ ನನ್ನ ಹತ್ತಿರ ಸಾವಿರ ದೀನಾರ ಮಾತ್ರವೇ ಇದೆ. ಏನು ಮಾಡಲಿ?" ಎಂದಳು ವಿಚಾರದಿಂದ.

"ಸಾವಿರವೇ ಸರಿಯಾಯಿತಲ್ಲ ಅಮ್ಮಾ? ಇನ್ನೂರನ್ನು ಮುಂದಾಗಿ ತೆಗೆದುಕೊಂಡಿದ್ದೇನಲ್ಲ?" ಎಂದಳು ದಿಲ್ಲೈಲಾ. ಖಾಲೀದನ ಹೆಂಡತಿ ಸಾವಿರ ದೀನಾರಗಳನ್ನು ದಿಲ್ಲೈಲಾಳಿಗೆ ಕೊಟ್ಟಳು. "ಈ ಮುದುಕೀನ ದಣಿಸದೆ ನನ್ನ ಕೆಲಸ ಮುಗಿಸಿ ಬಹಳ ಪುಣ್ಯಕಟ್ಟಿಕೊಂಡೆಯಮ್ಮ. ನನಗೆ ಆ ಗುಲಾಮರ ಮುಖ ನೋಡಲಿಕ್ಕೆ ಬಹಳ ಸಂಕಟವಾಗುತ್ತದೆ. ನನ್ನನ್ನು ನೋಡಿ ಅವರೆಲ್ಲ ಅತ್ತರೆ, ನಾನೂ ದುಃಖಪಡಬೇಕಾಗುತ್ತದೆ. ಆದ್ದರಿಂದ ನನ್ನನ್ನು ದಯಮಾಡಿ ಹಿಂದಿನ ಬಾಗಿಲಲ್ಲಿ ಕಳಿಸಿಬಿಡಮ್ಮ. ನಿಮ್ಮ ವ್ಯಾಪಾರ ಮುಗಿಯಿತೆಂದು ಅವರಿಗೂ ಹೇಳಿದ್ದೇನೆ" ಎಂದಳು ದಿಲ್ಲೈಲಾ. ಹಾಗೆಯೇ ಅವಳು ಆ ಭವನದಿಂದ ಹೊರಬಿದ್ದುದೂ ಆಯಿತು.

ಸ್ವಲ್ಪ ಹೊತ್ತಾದ ಮೇಲೆ ಖಾಲಿದ್ ನಿದ್ದೆಯಿಂದ ಎದ್ದನು. ಆಗ ಅವನ ಹೆಂಡತಿ, "ಒಟ್ಟಿನ ಮೇಲೆ



ನನ್ನನ್ನು ಆಶ್ಚರ್ಯಪಡಿಸಬೇಕಂತ ಇದ್ದಿರೇನು ? ನನಗೆ ಹೇಳದೆಯೇ ಒಳ್ಳೆಯ ವ್ಯಾಪಾರ ಮಾಡಿದ್ದೀರಿ !" ಎಂದು ಗುಲಾಮರ ಸಮಾಚಾರವನ್ನು ಹೇಳಿದಳು.

ಖಾಲೀದ್ ವಿಸ್ಮಿತನಾಗಿ, "ಏನಂದೆ ? ಗುಲಾಮರೆ ? ಹಾಗೆ ನಾನು ಯಾರಿಗೂ ಮುಂಗಡ ಕೊಡಲಿಲ್ಲವಲ್ಲ ?" ಎಂದನು.

"ಹೀಗೂ ಮರೆವೇ ? ನಾನು ಆ ಮುದುಕಿಗೆ ಸಾವಿರ ದೀನಾರ ಕೊಟ್ಟೆನು. ಅವಳು ಬಿಟ್ಟು ಹೋದ ಗುಲಾಮರು ಕೆಳಗೇ ಇದ್ದಾರೆ. ನೋಡಿರಿ !" ಎಂದಳು ಹೆಂಡತಿ.

ಖಾಲೀದ್ ಬೇಗ ಬೇಗನೆ ಕೆಳಗೆ ಹೋಗಿ, ಅವನನ್ನೇ ಕಾದುಕೊಂಡಿದ್ದ ಅಂಗಡಿಗಾರನನ್ನೂ, ರಂಗಾರಿಯನ್ನೂ, ರತ್ನ ವ್ಯಾಪಾರಿಯನ್ನೂ, ಹಜಾಮ ಮಸೂದನನ್ನೂ, ಕತ್ತೆಯ ಹುಡುಗನನ್ನೂ ನೋಡಿ ಆತ್ಯಾಶ್ಚರ್ಯ ಪಟ್ಟನು.

"ನಾನು ಕೊಂಡುಕೊಂಡ ಗುಲಾಮರೋ ನೀವು?" ಎಂದು ಅವನು ಅವರನ್ನು ನೋಡಿ ಕೇಳಿದನು.

"ನಾವು ಗುಲಾಮರೇ ? ನಡೆಯಿರಿ ಖಲೀಫರ ಬಳಿಗೆ! ಅವರನ್ನೇ ಕೇಳೋಣ" ಎಂದರು ಆ ಐವರೂ.

ಆ ಹೊತ್ತಿಗೆ ಮುಸ್ತಫಾ ಸಹ ಅಲ್ಲಿಗೆ ಬಂದನು. ತನ್ನ ಹೆಂಡತಿಗೆ ಮುದುಕಿಯೊಬ್ಬಳು ಮಾಡಿದ ಮೋಸವನ್ನು ಕುರಿತು ಅವನಿಗೆ ಗೊತ್ತಾಗಿತ್ತು. ಅವನು ಖಾಲೀದನೊಂದಿಗೆ, "ನಿಮ್ಮ ನಿರ್ವಹಣೆ ಚೆಂದ ಚೆನ್ನಾಗಿದೆ ! ಪ್ರತಿಯೊಂದು ಮುದಿ ಹೆಣ್ಣೂ ತನ್ನಿಷ್ಟ ಬಂದ ಹಾಗೆ ಯಾರು ಯಾರ ಮನೆಗೋ ನುಗ್ಗಿ ಪಾಪದ ಹೆಣ್ಣುಗಳನ್ನು ಮೋಸಪಡಿಸುವ ಹಾಗಾಯಿತು ! ಈಗ ನನ್ನ ಹೆಂಡತಿಗೆ ನಡೆದ ಅನ್ಯಾಯಕ್ಕೆ ಏನು ಹೇಳುವಿರಿ ? ಇದೆಲ್ಲಾ ನಿಮ್ಮ ಜವಾಬ್ದಾರಿ ತಾನೆ ?" ಎಂದನು.

ಖಾಲಿದ್ ಗಾಬರಿಯಾಗಿ, "ಅಯ್ಯಾ, ಕೋಪಿಸ ಬೇಡಿ. ಈ ಮುದುಕಿಯನ್ನು ಹಿಡಿದು ಶಿಕ್ಷಿಸುವ ಭಾರ ನನ್ನದೇ. ನಿಮ್ಮೆಲ್ಲರಿಗೂ ಅವಳಿಂದಾದ ನಷ್ಟ ನಾನೇ ಕೊಡುತ್ತೇನೆ" ಎಂದನು.

ಆಮೇಲೆ ಅವನು ಉಳಿದ ಐವರ ಕಡೆಗೂ ತಿರುಗಿ "ನಿಮ್ಮಲ್ಲಿ ಆ ಮುದುಕಿಯನ್ನು ಗುರುತಿಸುವವರು ಯಾರಿದ್ದೀರಿ ? ಎಂದು ಕೇಳಿದನು. ಐವರೂ ಗುರುತಿಸಬಲ್ಲೆವೆಂದರು. "ನೀವು ನಮ್ಮೊಂದಿಗೆ ಹತ್ತು ಮಂದಿ ಭಟರನ್ನು ಕಳುಹಿಸಿ ಕೊಟ್ಟರೆ ಅವಳನ್ನು ಹಿಡಿದು ತರಲೂ ನಮ್ಮಿಂದಾದೀತು !" ಎಂದರು ಐವರೂ ಸಹ.

"ಹಾಗಾದರೆ ಇನ್ನೇನು ?" ಎಂದು ಖಾಲೀದ್ ಹತ್ತು ಮಂದಿ ಭಟರನ್ನು ಅವರೊಂದಿಗೆ ಕಳುಹಿಸಿದನು. ಅವರು ಭಟರನ್ನು ಕರೆದುಕೊಂಡು ಸ್ವಲ್ಪ ದೂರ ಹೋದರೋ ಇಲ್ಲವೋ, ದಿಲೈಲಾ ಅವರ ಇದಿರಿಗೇ ಬರುತ್ತ, ತಪ್ಪಿಸಿಕೊಳ್ಳಲು ತಿರುಗಿದಳು.

ಅಷ್ಟರಲ್ಲಿ ಅವರೆಲ್ಲ ಭರದಿಂದ ಹೋಗಿ ಅವಳನ್ನು ಹಿಡಿದು, ಕೈಗಳನ್ನು ಹಿಂದಕ್ಕೆ ಬಿಗಿದು ಕಟ್ಟಿ

ಖಾಲೀದನ ಬಳಿಗೆ ಎಳೆದುಕೊಂಡು ಹೋದರು. ಖಾಲೀದ್ ದಿಲ್ಶೈಲಾಳನ್ನು ಕಳ್ಳತನದ ವಿಷಯ ವನ್ನು ಕುರಿತು ಪ್ರಶ್ನಿಸಲು, "ನೀವು ಹೇಳುವುದು ನನಗೊಂದೂ ಅರ್ಥವಾಗುವುದಿಲ್ಲ. ನಾನು ನನ್ನ ಜನ್ಮದಲ್ಲಿ ಕಳ್ಳತನ ಮಾಡಿದ್ದೇ ಇಲ್ಲ. ಸಾಯಲಿಕ್ಕೆ ಬಿದ್ದ ನನ್ನಂಥ ಮುದುಕಿಗೆ ಕಳ್ಳತನವೇಕೆ!" ಎಂದಳು.

ಆ ಸಮಯಕ್ಕೆ ಹೊತ್ತು ಮುಳುಗಿದುದರಿಂದ, ಹೆಚ್ಚು ವಿಚಾರಿಸಲು ಸಮಯವಿರಲಿಲ್ಲ. ಆವಳು ಮಾಡಿದಂತಹ ದುರನ್ಯಾಯಗಳು ತುಂಬಾ ಇವೆ. ವಿಚಾರಿಸಬೇಕಾದ ಸಾಕ್ಷಿಗಳು ಅನೇಕರಿದ್ದಾರೆ. ಆದು ದರಿಂದ ಆ ರಾತ್ರಿ ಅವಳನ್ನು ಖೈದಿನಲ್ಲಿಟ್ಟು ಬೆಳಗಾದ ಮೇಲೆ ವಿಚಾರಿಸುವುದು ಚೆನ್ನಾಗಿರುತ್ತೆ. ಇಡೀ ರಾತ್ರಿ ಕತ್ತಲೆ ಕೋಣೆಯಲ್ಲಿದ್ದರೆ ಸ್ವಲ್ಪ ಮೆತ್ತ ಗಾದಾಳು. ಹೀಗೆಂದುಕೊಂಡು ಖಾಲೀದ್ ಜೈಲಿನ ಅಧಿಕಾರಿಯ ಹತ್ತಿರ ಅವಳ ಬಾಧ್ಯತೆ ಒಪ್ಪಿಸಲು ನೋಡಿದನು. ಆದರೆ ಜೈಲಿನ ಅಧಿಕಾರಿ, "ಇಷ್ಟು ದೊಡ್ಡ ಕಳ್ಳಿ ಏನೋ ಉಪಾಯಮಾಡಿ ತಪ್ಪಿಸಿ ಕೊಂಡರೆ ನನ್ನ ತಲೆ ಉಳಿಯಲಾರದು" ಎಂದನು.

"ಆದು ನಿಜವೇ. ಹಾಗಾದರೆ ವಿಚಾರಣೆ ನಡೆ ಯುವ ವರೆಗೆ ಆ ಮುದುಕಿಯನ್ನು ನಾಲ್ಕು ಮಂದಿ ಗಳ ಕಾವಲಿನಲ್ಲಿರಿಸುವುದೇ ಒಳ್ಳೆಯದು." ಎಂದನು ಖಾಲೀದ್. ಆವನು ಕುದುರೆಯನ್ನು ಹತ್ತಿ. "ನನ್ನ ಹಿಂದೆ ಬನ್ನಿರಿ" ಎಂದು ಹೇಳಿ ಮುಂದೆ ಹೋದನು. ಐವರು ಫಿರ್ಯಾದಿಗಳೂ ದಿಲ್ಶೈಲಾಳನ್ನು ಎಳೆದು ಕೊಂಡು ಹೋದರು. ಅಲ್ಲಿ ಬಯಲು ಪ್ರದೇಶದಲ್ಲಿ ಅವಳನ್ನು ಒಂದು ಕಂಬಕ್ಕೆ ಕಟ್ಟಿ ಹಾಕಿಸಿ, ಮುಖ್ಯ ಫಿರ್ಯಾದಿಗಳನ್ನು ನೋಡಿ, "ನೀವೇ ನೋಡಿಕೊಳ್ಳು ವಿರಾ? ಭಟರೂ ಬೇಕೆ?" ಎಂದು ಕೇಳಿದನು ಖಾಲೀದ್.

"ಇವಳಿಗೆ ಶಿಕ್ಷೆಯಾಗದೆ ನಮಗೆ ನಿದ್ದೆ ಬಾರದು. ನಾವೇ ನೋಡಿಕೊಳ್ಳುತ್ತೇವೆ" ಎಂದರು ಐವರೂ.

ಸರಿಯೆಂದು ಖಾಲೀದ್ ನಗರದೊಳಗೆ ಹೋದನು. ಐವರೂ ದಿಲ್ಶೈಲಾಳ ಸುತ್ತಲೂ ಕುಳಿತು ಅವಳನ್ನು ಬಗೆ ಬಗೆಯಾಗಿ ಬಯ್ಯುತ್ತ, ತಮ್ಮ ಊಟ ಮುಗಿಸಿ ಕೊಂಡರು. ಹೊತ್ತು ಹೋದಂತೆ ಒಬ್ಬೊಬ್ಬರಿಗೂ ತೂಕಡಿಕೆ ಶುರುವಾಗಿ, ನಿದ್ದೆ ಬಂದಿತು. ಅವರಿಗೆ ಮೂರು ರಾತ್ರಿ ಸರಿಯಾಗಿ ನಿದ್ದೆ ಬಂದಿರಲಿಲ್ಲ.

ನಡು ರಾತ್ರಿ ಕಳೆದ ಮೇಲೆ ಆ ಪ್ರಾಂತಕ್ಕೆ ಮತ್ತಿಬ್ಬರು ಬಂದು ಕೂಡಿದರು, ಒಬ್ಬನು ಹೊಸತಾಗಿ ಆ ನಗರಕ್ಕೆ ಬಂದವನು. ಎರಡನೆಯವನು ಆ ನಗರವನ್ನು ಬಿಟ್ಟು ಎಲ್ಲಿಗೋ ಹೋಗುವವನು. ಇಬ್ಬರೂ ಅಲ್ಲಿ ನಿಂತು ಮಾತಿಗೆ ತೊಡಗಿದರು. ಅವರ ಮಾತು ತುಸು ದೂರದಲ್ಲಿರುವ ದಿಲ್ಶೈಲಾಳಿಗೆ ಕೇಳಿಸುತ್ತಲೇ ಇತ್ತು.






೪

**ಬಾ**ಗ್ದಾದು ನಗರಕ್ಕೆ ಹೊಸದಾಗಿ ಬಂದವನು ಅಲ್ಲಿಂದ ಹೊರಟುಹೋಗುವವನನ್ನು ಕುರಿತು, "ಒಂದು ಮುಖ್ಯ ಸಂಗತಿ ಹೇಳಯ್ಯ. ಈ ನಗರದಲ್ಲಿ ಮುಖ್ಯವಾಗಿ ಅನುಭವಿಸತಕ್ಕಂಥಾದ್ದು ಏನೂ ಅಂತ ?" ಎಂದು ಕೇಳಿದನು.

"ಕೆನೆ ಪೂಸಿದ ಜೇನು ರೊಟ್ಟಿ ! ಆಹ ! ಏನು ರುಚಿ ! ನಾನು ಇಲ್ಲಿದ್ದ ಮೂರು ದಿಗನಳೂ ಅದನ್ನೇ ಎಷ್ಟು ತಿಂದರೂ ಸಾಕೆನಿಸದು !" ಎಂದನು ಹೊರಟುಹೋಗುವವನು.

"ಭೇಷ್ ! ಎಷ್ಟು ಖರ್ಚಾದರೂ ನಾನು ಈ ನಗರದಲ್ಲಿ ಇರುವಷ್ಟು ದಿನವೂ ಕೆನೆಪೂಸಿದ ಜೇನು ರೊಟ್ಟಿನೇ ತಿನ್ನುತ್ತೇನೆ." ಅಂದನು ನಗರಕ್ಕೆ ಹೊಸದಾಗಿ ಬಂದವನು. ಹೋಗುವವನು ತನ್ನ ದಾರಿ ಹಿಡಿದು ಹೊರಟುಹೋದನು. ಆಮೇಲೆ ಹೊಸದಾಗಿ ಬಂದವನು ದಿಲೈಲಾ ಕಟ್ಟಲ್ಪಟ್ಟ ಕಡೆಗೇ ಬರತೊಡಗಿದನು. ಅವರ ಸಂಭಾಷಣೆಗಳನ್ನು ಕೇಳುತ್ತಾ ಇದ್ದ ದಿಲೈಲಾ ಆಗಿಂದಾಗಲೇ ಒಂದು ಯುಕ್ತಿಯನ್ನು ಆಲೋಚನೆ ಮಾಡಿಕೊಂಡು ತಯಾರಾಗಿದ್ದಳು. ಅದರಂತೆ ನಡೆದರೆ ತಾನು ತಪ್ಪಿಸಿಕೊಳ್ಳಬಹುದೆಂದು ಅವಳ ನಂಬುಗೆ. ಹೊಸದಾಗಿ ನಗರಕ್ಕೆ ಬಂದವನಿಗೆ ತಾನು ಯಾರೆಂದು ಏನೂ ತಿಳಿಯದು. ಆದ್ದರಿಂದ ಅವನನ್ನು ಮೋಸಪಡಿಸಬಹುದೆಂದು ದಿಲೈಲಾಳಿಗೆ ತೋರಿತು. ಹೀಗೆ ಆಲೋಚಿಸಿ ದಿಲೈಲಾ, "ಸಾಕಪ್ಪಾ ! ನನಗೆ ಬೇಡಯ್ಯಾ ! ನಾನು ತಿನ್ನಲಾರೆ !" ಎಂದು ತನಗೆ ತಾನೇ ಸಂಕಟಪಡುತ್ತ ಹೇಳತೊಡಗಿದಳು. ಅದನ್ನು ಕೇಳಿ ಹೊಸಬನು ಅವಳ ಬಳಿಗೆ ಬಂದು, "ಏನಮ್ಮಾ? ಏನು ಹೇಳುವಿ ? ಯಾಕೆ ಹೀಗೆ ಕಟ್ಟಿಗೆ ಸಿಕ್ಕಿರುವಿ ? ಎಂದು ಕೇಳಿದನು.

ದಿಲೈಲಾ ಮೆಲ್ಲಗೆ ಮಾತಾಡುವಂತೆ ಸನ್ನೆ ತೋರಿಸಿ, "ಅದೇನು ಕೇಳುವಿಯಪ್ಪಾ ? ನನ್ನ ಕರ್ಮ ! ನನ್ನ ಗಂಡ ಕೆನೆಪೂಸಿದ ಜೇನುರೊಟ್ಟಿ ತಯಾರಿಸಿ ಅವುಗಳ ವ್ಯಾಪಾರದಿಂದ ಲಕ್ಷಗಟ್ಲೆ ಸಂಪಾದಿಸಿದ್ದಾನೆ. ಮೊದಮೊದಲು ನನಗೆ ಆ ರೊಟ್ಟಿ ಇಷ್ಟವಾಗಿದ್ದರೂ, ಬರುಬರುತ್ತ ಬಾಯಿಗೆ ವಾಕರಿಕೆಯಾಯಿತು. ಮೊನ್ನೆ ಒಬ್ಬ ದೊಡ್ಡ ಮನುಷ್ಯರು ನಮ್ಮ ರೊಟ್ಟಿಯಂಗಡಿಗೆ ಬಂದಾಗ, ನನ್ನ ಗಂಡ ಅವರಿಗೆ ಉಪಚರಿಸುತ್ತ ಅವರ ಜತೇಲಿ



ನನ್ನನ್ನೂ ಜೇನುರೊಟ್ಟಿ ತಿನ್ನುವಂತೆ ಒತ್ತಾಯಿಸಿ ಬಿಟ್ಟನಪ್ಪಾ. ಬಾಯಿಗಿಟ್ಟ ಕೂಡಲೇ ವಾಕರಿಕೆ ಕುಟ್ಟಿಕುಟ್ಟಿ ಬಂತು ನನಗೆ. ಅದನ್ನು ನೋಡಿ ಬಂದವರಿಗೆ ಅನುಮಾನವಾಗಿ, ಏನೂ ತಿನ್ನದೆಯೇ ಹೊರಟುಹೋದರು. ನನ್ನ ಗಂಡನಿಗೆ ಅವರಿಂದ ಬರಬೇಕಾದ ಹಣವೂ ಬರಲಿಲ್ಲ. ಮಾಡಿಟ್ಟ ಸರಕು ಪೂರಾ ವ್ಯರ್ಥವಾಯಿತು. ಅದೆಲ್ಲ ನಿಜವೇ ಆದರೂ ಇದರಲ್ಲಿ ನನ್ನ ತಪ್ಪು ಏನಿದೆ ಹೇಳು? ನನ್ನನ್ನು ನನಗೆ ಹಿಡಿಸದ ರೊಟ್ಟಿ ತಿನ್ನುವಂತೆ ಒತ್ತಾಯಿಸಿದ್ದು ಗಂಡನದೇ ತಪ್ಪು. ಆದರೂ ತನ್ನ ವ್ಯಾಪಾರ ಹಾಳುಮಾಡಿದೇ ಅಂತ ಗಂಡ ನನ್ನ ಮೇಲೆ ಫಿರ್ಯಾದಿ ಮಾಡಿದ. ನ್ಯಾಯಾಧಿಕಾರಿ ನನಗೆ ಜೇನುರೊಟ್ಟಿ ತಿನ್ನುವ ಶಿಕ್ಷೆ ವಿಧಿಸಿ ಇಲ್ಲಿ ಕಟ್ಟಿ ಹಾಕಿಸಿದ್ದಾನೆ. ಬೆಳಗಾದ ಕೂಡಲೇ ಭಟರು ಬಂದು ಕೆನೆಹಚ್ಚಿದ ಜೇನುರೊಟ್ಟಿಯಷ್ಟು ತಂದಿಟ್ಟು ತಿನ್ನಲು ಬಲವಂತಪಡಿಸುತ್ತಾರಪ್ಪ. ಎಲ್ಲರ ಎದುರಿನಲ್ಲಿ ತಿನ್ನಬೇಕಂತೆ. ತಿಂದು ಮುಗಿಸುವ ವರೆಗೂ ಊಟ ಹಾಕಲಾರರು. ನನ್ನ ಕಷ್ಟ ಏನು ಹೇಳಲಪ್ಪಾ!" ಎಂದು ಗೋಳಿಟ್ಟಳು.

"ಅಯ್ಯೋ! ಅವ್ವಾ! ನಿನಗೆ ಎಂಥಾ ಕಷ್ಟ ಬಂತು! ಆ ಕಷ್ಟ ನನಗಾದರೂ ಬರಬಾರದೆ?" ಎಂದನು ಹೊಸಬ ಅನುತಾಪದಿಂದ.

"ಹಾಗಾದರೆ ಒಂದು ಮಾಡುತ್ತೀಯಾ? ನಿನಗೂ ಪುಣ್ಯ! ನನ್ನ ಕಟ್ಟುಗಳನ್ನು ಬಿಚ್ಚಿಬಿಡು. ನನಗೆ ಬದಲು ನನ್ನಹಾಗೇ ನೀನು ಕಟ್ಟಿನಲ್ಲಿರು. ನನ್ನ ಮುಸುಕುಬಟ್ಟೆ ನಿನಗೇ ಹಾಕುತ್ತೇನೆ. ನಾನೇ ಅಂದುಕೊಂಡು ಭಟರು ನಿನಗೆ ಕೆನೆಪೂಸಿದ ಜೇನು ರೊಟ್ಟಿಗಳಿಂದ ಧಾರಾಳವಾಗಿ ಮೇಯಿಸಿ ಬಿಟ್ಟು ಬಿಡುತ್ತಾರೆ!" ಎಂದರು ದಿಲೈಲಾ.

ಮೋಸಹೋದ ಹೊಸಬನು ಅವಳ ಕಟ್ಟು ಬಿಚ್ಚಿದನು. ಅವಳು ಅವನನ್ನು ಕಂಬಕ್ಕೆ ಕಟ್ಟಿ, ಮುಖಕ್ಕೆ ಮುಸುಗುಹಾಕಿ, ಅಲ್ಲಿದ್ದೊಂದು ಕುದುರೆಯ ಮೇಲೇರಿಕೊಂಡು ಬಾಗ್ದಾದಿಗೆ ಹೊರಟುಹೋದಳು.

ಮೈಮರೆತು ನಿದ್ರೆಯಲ್ಲಿದ್ದ ಫಿರ್ಯಾದಿಗಳು ಐವರೂ ಬೆಳಗಾದ ಮೇಲೆ ಎದ್ದು ಕಂಬಕ್ಕೆ ಕಟ್ಟಿರುವುದು ದಿಲೈಲಾಳೆಂದೇ ನೆನೆದು. ಮತ್ತೆ ಅವಳನ್ನು ಬೈಯಲು ತೊಡಗಿದರು. ಸುಮ್ಮನೆ ಹೊತ್ತು ಹೋಗುವುದನ್ನು ನೋಡಿ, ಕಂಬಕ್ಕೆ ಕಟ್ಟಲ್ಪಟ್ಟವನು ಬೇಸರದಿಂದ ಸ್ವರ ಬದಲಾಯಿಸಿ ಕೊಂಡು, "ಶಿಕ್ಷೆ ಬೇಗ ಮುಗಿಸಿರಯ್ಯಾ. ಜೇನು ರೊಟ್ಟೀ ತನ್ನೀ" ಎಂದನು. ಕೂಡಲೇ ಸಂದೇಹ ಪಟ್ಟು ಸುತ್ತಲಿದ್ದವರು ಅವನ ಮುಖದ ಮುಸುಕನ್ನು ತೊಲಗಿಸಿ, ನೋಡಿ, ಮುದುಕಿ ಮತ್ತೆ ತಮ್ಮ ಕಣ್ಣಿಗೆ ಖಾರದಪುಡಿ ಹಾಕಿ ಪಾರಾದುದನ್ನು ತಿಳಿದುಕೊಂಡರು. ರೊಟ್ಟಿಯ ಆಸೆಯಿಂದ ಮೋಸ ಹೋದುದಕ್ಕೆ ಆ ಹೊಸಬನೂ ತಾನೇ ತನ್ನ ತಲೆ ಚಚ್ಚಿಕೊಂಡನು.

ಸ್ವಲ್ಪ ಹೊತ್ತಿಗೆ ಸ್ವತಃ ಖಾಲೀದ್ ಅಲ್ಲಿಗೆ ಬಂದು, ನಡೆದ ಸಂಗತಿಯನ್ನೆಲ್ಲಾ ಕೇಳಿ, ಇದರ ಪರಿಷ್ಕಾರ ತನ್ನಿಂದಾಗುವಂತಹುದಲ್ಲವೆಂದು ತಿಳಿದನು. ಅವನು ಎಲ್ಲರನ್ನೂ ಕರೆದುಕೊಂಡು ನೇರಾಗಿ ಖಲೀಫನ ಬಳಿಗೇ ಹೋದನು.

ಹಾರೂನ್ ಅಲ್ ರಷೀದ್ ಖಲೀಫನು ಎಲ್ಲರ ಕಥೆಯನ್ನೂ ಕೇಳಿ, ಯಾರು ಯಾರಿಗೆ ಏನೇನು ನಷ್ಟವಾಯಿತೋ, ಅದನ್ನೆಲ್ಲಾ ತಾನು ಕೊಟ್ಟು ಸರಿಮಾಡುವೆನೆಂದು ಮಾತುಕೊಟ್ಟನು. ಆದರೆ ಮೊದಲು ಆ ಕಳ್ಳ ಮುದುಕಿಯನ್ನು ಹಿಡಿಯ ಬೇಕಾಗಿತ್ತು. ಖಾಲೀದ್ ಮತ್ತು ಮುಸ್ತಫಾ ಇಬ್ಬರೂ ಕೂಡಿ ಆ ಮುದುಕಿಯನ್ನು ಹಿಡಿಯ ಬೇಕೆಂದು ಖಲೀಫನ ಆಜ್ಞೆಯಾಯಿತು.

ತನ್ನಿಂದ ಆ ಕೆಲಸ ಸಾಧ್ಯವಿಲ್ಲವೆಂದು ಖಾಲೀದ್ ಹೇಳಿದುದನ್ನು ಕೇಳಿ, "ಹಾಗಾದರೆ ಆ ಕೆಲಸಕ್ಕೆ ತಕ್ಕವರನ್ನು ನೀನೇ ನೋಡು" ಎಂದನು ಖಲೀಫಾ.

"ಹೊಸದಾಗಿ ಕೋತ್ವಾಲ ಪದವಿಗೆ ಬಂದ ಅಹ್ಮದ್ ಇರುವಾಗ ಇನ್ನೊಬ್ಬರ ಮಾತೇಕೆ? ಅವನು ಪದವಿಗೆ ಬಂದ ಮೇಲೆ ಈವರೆಗೂ ಯಾರನ್ನೂ ಹಿಡಿದ ಗುರುತು ಇಲ್ಲ. ಆ ಮುದುಕಿಯನ್ನು ಹಿಡಿದರೆ ಅವನೇ ಹಿಡಿಯಬೇಕು. ಈ ಕೆಲಸ ಕೂಡಾ ಮಾಡಲಾಗದೆ ಹೋದರೆ, ಅವನ ಪ್ರಶ್ನೆ ಮತ್ತೇಕೆ?" ಎಂದನು ಖಾಲೀದ್.

ಅದೇ ಸರಿಯೆಂದು ಖಲೀಫನು ಅಹ್ಮದನನ್ನು ಕರೆಯಿಸಿ, ಅವನೊಂದಿಗೆ ಮುದುಕಿಯ ಕಥೆಯನ್ನೆಲ್ಲಾ ಹೇಳಿ, ಅವಳನ್ನು ಹಿಡಿಯತಕ್ಕದ್ದೆಂದು ಆಜ್ಞೆ ಕೊಟ್ಟನು. ಅಹ್ಮದ್ ಆ ಕ್ಷಣವೇ ತನ್ನ ನಲುವತ್ತು ಮಂದಿ ಭಟರೊಂದಿಗೆ ಹೊರಟುಬಿಟ್ಟನು.

ಈ ಭಟರಿಗೆ ಮುಖಂಡನಾಗಿ, ಗೂನನಾದ ಅಲೀ, ಎಂಬವನಿದ್ದನು. ಅವನು ತನ್ನ ಒಡೆಯನಾದ ಅಹ್ಮದನನ್ನು ನೋಡಿ, "ಅಯ್ಯಾ, ನನ್ನದೊಂದು



ಸೂಚನೆ. ನಾವು ಈ ಮುದುಕಿಯನ್ನು ಹಿಡಿಯಲಿಕ್ಕೆ ಪಟ್ಟಣದ ಹಸನ್‌ರವರ ಸಹಾಯ ಪಡೆಯುವುದು ಒಳ್ಳೇದು" ಎಂದನು.

"ಎಲೋ ಗೂನ ಮೂರ್ಖ! ನಮಗೆ ಇನ್ನೊಬ್ಬರು ಸಹಾಯ ಮಾಡುವುದೆಂದರೆ ಎಂಥ ನಾಚಿಕೆಗೇಡು! ನಾವೇನು ಕೈಲಾಗದವರೆಂದು ಕೊಂಡೆಯಾ? ಇನ್ನೊಮ್ಮೆ ಈ ಮಾತು ಹೇಳಿದರೆ ಬೆನ್ನು ಮೂಳೆಪುಡಿಯಾದೀತು! ಖಬರ್‌ದಾರ್!" ಎಂದು ಅಧಟಿದನು ಅಹ್ಮದ್.

ಆ ಮುದುಕಿಯನ್ನು ಹಿಡಿಯುವ ಭಾರವನ್ನು ತನಗೆ ಕೊಡುವುದನ್ನು ಬಿಟ್ಟು ಅಹ್ಮದನನ್ನು ನಿಯೋಜಿಸಿದುದರಿಂದ ಹಸನ್ ತನ್ನೊಳಗೇ ನೊಂದುಕೊಂಡನು. ಅಹ್ಮದನ ಪ್ರಗಲ್ಭತೆಯನ್ನು ಕೇಳಿ ತನ್ನೊಳಗೆ "ಇರಲಿರಲಿ! ನನ್ನ ಸಹಾಯ ವಿಲ್ಲದೆ ಇವನು ಆ ಮುದುಕಿಯನ್ನು ಹಿಡಿದ ಕಾಲಕ್ಕೆ ನೋಡಿಕೊಳ್ಳುತ್ತೇನೆ!" ಎಂದುಕೊಂಡನು.

ಅಹ್ಮದನು ತನ್ನ ನಲುವತ್ತು ಮಂದಿ ಭಟರನ್ನೂ ರಾಜ ಸೌಧದ ಹೊರಗೆ ವಿಶಾಲವಾಗಿದ್ದ ಮೈದಾನದಲ್ಲಿ ವರಿಸೆಯಾಗಿ ನಿಲ್ಲಿಸಿ, "ಧೀರಾಗ್ರೇಸರರೇ ! ನಿಮ್ಮನ್ನು ನಾಲ್ಕು ಭಾಗಗಳಾಗಿ ಮಾಡುತ್ತೇನೆ. ನೀವು ನಾಲ್ಕು ದಳಗಳಾಗಿ ನಗರದ ನಾಲ್ಕು ಭಾಗಗಳಲ್ಲಿಯೂ ಚೆನ್ನಾಗಿ ಬೇಟೆಯಾಡಿ ಆ ಕಳ್ಳ ಮುದುಕಿಯನ್ನು ಗಾಳಿಸಬೇಕು. ನಾಳೆ ಮಧ್ಯಾಹ್ನದ ಹೊತ್ತಿಗೆ ಎಲ್ಲರೂ ಮುಸ್ತಫಾ ಬೀದಿಯಲ್ಲಿರುವ ಸಾರಾಯಿ ಅಂಗಡಿಯ ಹತ್ತಿರ ಸೇರಿಕೊಳ್ಳಬೇಕು. ನಾನು ಅಲ್ಲಿಗೆ ಬಂದು ನಿಮ್ಮ ಅನುಭವವನ್ನು ಕೇಳುತ್ತೇನೆ." ಎಂದನು.

ಆ ರೀತಿಯಾಗಿ ನಾಲ್ಕು ದಳಗಳೂ ನಾಲ್ಕು ದಿಕ್ಕುಗಳಿಗೆ ಹೊರಟವು. ಆಮೇಲೆ ಅಹ್ಮದನೂ ಸ್ವತಃ ಮುದುಕಿಯನ್ನು ಪತ್ತೇಮಾಡಿ ಹಿಡಿಯಲು ಹೊರಟನು. ಖಲೀಫನು ತನ್ನನ್ನು ಹಿಡಿಯಲು ಕೋತ್ವಾಲ ಪ್ರಮುಖನಾದ ಅಹ್ಮದನನ್ನು ನಿಯೋಜಿಸಿದ ಸಂಗತಿ ದಿಲ್ಲೈಲಾಳಿಗೆ ತಿಳಿಯಿತು. ಅದರಿಂದ ಅವಳು ಸ್ವಲ್ಪವೂ ಹೆದರಲಿಲ್ಲ. ಅವಳು ತನ್ನ ಮಗಳನ್ನು ನೋಡಿ ನಗುತ್ತ "ಮಗಳೇ, ನನ್ನನ್ನು ಹಿಡಿಯಬಲ್ಲವನೂ ಅಂತ ಒಬ್ಬ ಇದ್ದರೆ ಹಸನ್ ಒಬ್ಬನೇ. ಖಲೀಫರು ಅವನನ್ನು ಈ ಕೆಲಸಕ್ಕೆ ಉಪಯೋಗಿಸದೆ ಬಿಟ್ಟದ್ದು ನಮ್ಮ ಅದೃಷ್ಟ ಅನ್ನು. ಇನ್ನು ಈ ಅಹ್ಮದನನ್ನು ನೀನೊಬ್ಬಳು ಕೂಡಾ ಗೋಳಾಡಿಸಬಹುದು" ಎಂದಳು. "ಹಾಗಾದರೆ ಈಸಾರಿ ನಾನು ಹೋಗಿ ಅವರನ್ನು ಮೋಸಪಡಿಸಿ ಬರಲೇ ಅಮ್ಮಾ ?" ಎಂದು ಜೀನಾಬ್ ತಾಯಿಯನ್ನು ಕೇಳಿದಳು.

"ಹೋಗಿ ಬಾ ಕಂದಾ. ನಾನು ಸ್ವಲ್ಪ ದಣಿವಾರಿಸಿಕೊಳ್ಳುತ್ತೇನೆ" ಎಂದಳು ದಿಲ್ಲೈಲಾ.

ಜೀನಾಬ್ ಅತ್ಯುತ್ಸಾಹದಿಂದ ತನ್ನನ್ನು ಅಲಂಕರಿಸಿಕೊಂಡು, ಕನ್ನಡಿಯಂತಹ ಅತಿತೆಳ್ಳಗಿನ ಮೇಲುಮುಸುಗಿನೊಂದಿಗೆ ಹೊರಟಳು. ಅವಳು ಮುಸ್ತಫಾ ಬೀದಿಗೆ ಪ್ರವೇಶಿಸಿ, ಹಾಜ್ ಕರೀಂ ಎಂಬವನು ನಡೆಸುವ ಸಾರಾಯಿ ಖಾನೆಗೇ ಹೋಗಿ, ಹಾಜ್ ಕರೀಂಗೆ ಎರಡು ಸಲಾಮುಗಳನ್ನು ಮಾಡಿ, "ಕೆಲವು ಮಂದಿ ಆಪ್ತ ಮಿತ್ರರು ಇಲ್ಲಿಗೆ ಬರುತ್ತಾರೆ. ಅವರು ಸಾಧಾರಣ ಮನುಷ್ಯರೊಂದಿಗೆ ಸಂಬಂಧವಿಲ್ಲದಹಾಗೆ ಕಾಲಕ್ಷೇಪ ಮಾಡಬೇಕಾಗಿದೆ. ಆದ್ದರಿಂದ ನಿಮ್ಮಲ್ಲಿರುವ ದೊಡ್ಡದೊಂದು ಕೋಣೆಯನ್ನು ಒಂದು ದಿನದ ಮಟ್ಟಿಗೆ ಬಾಡಿಗೆಗೆ ಕೊಡಬೇಕು. ಐದು ದೀನಾರಾ ತೆಗೆದುಕೊಳ್ಳಿರಿ" ಎಂದಳು. ಹಾಜ್ ಕರೀಂ ಜೀನಾಬಳ ಅಂದಚಂದ ಮಧುರ ಮಾತು ಮೊದಲಾದುವುಗಳಿಂದ ಆಕರ್ಷಿತನಾಗಿ "ಆಗಲಿ. ಬಾಡಿಗೆಯೇ ಬೇಕಾಗಿಲ್ಲ. ಇರುವ ಸಾರಾಯಿ ಪೂರಾ ಖರ್ಚಾದರೇ ಸಾಕು" ಎಂದನು.

(ಇನ್ನೂ ಇದೆ)






೫

ಜೀನಾಬ್ ಕಿರುನಗೆಯನ್ನು ಸೂಸುತ್ತ, "ಓಹೊ! ಅದಕ್ಕೇನೂ ಕಡಿಮೆಯಾಗದು. ನನ್ನ ಮಿತ್ರರಾದ ಆ ದೊಡ್ಡ ಮನುಷ್ಯರೆಂದರೆ ಪಾನಭಾಂಡಗಳಂಥವರೇ. ಕಡಿಮೆ ಬಿದ್ದರೆ ತರಿಸಿಕೊಡಲೂ ಬೇಕಾದೀತು" ಎಂದಳು.

"ಭೇಷ್ಪಾಗಿ ತರಿಸುವಾ, ಅದಕ್ಕೇನಂತೆ" ಎಂದು ಹಾಜ್ ಕರೀಂ ದೊಡ್ಡದಾಗಿ ಬಾಯಿ ತೆರೆದು ನಕ್ಕನು. ಜೀನಾಬ್ ತನ್ನ ಮನೆಗೆ ಹೋಗಿ, ಒರಗುದಿಂಬು, ಸುಖಾಸನ, ಮೇಜು, ತಟ್ಟೆ ಲೋಟೆ ಮೊದಲಾದ ಸೊಗಸು ಸಾಮಾನುಗಳನ್ನು, ಸಾಗಿಸಿಕೊಂಡು ಸಾರಾಯಿ ಖಾನೆಗೆ ಹಿಂದಿರುಗಿ ಬಂದು ವಿಶಾಲವಾದ ದಿವಾಣ ಖಾನೆಯಲ್ಲಿ ಓರಣವಾಗಿರಿಸಿ, ಬಾಗಿಲಲ್ಲೇ ನಿಂತಳು.

ಸ್ವಲ್ಪ ಹೊತ್ತಿನ ಮೇಲೆ ಗೂನಿ ಅಲಿಯೂ, ಅವನೊಂದಿಗೆ ಒಂಬತ್ತು ಮಂದಿ ವೀರಭಟರೂ ಜೋರಿನಿಂದ ಮಾತಾಡಿಕೊಳ್ಳುತ್ತ ಅಲ್ಲಿಗೆ ಬಂದರು. ಜೀನಾಬ್ ಗೂನೀ ಅಲೀಗೆ ಬಗ್ಗಿ ಸಲಾಂ ಹೇಳಿ, "ನೀವೇನಾ ಅಹ್ಮದ್?" ಎಂದು ಕೇಳಿದಳು.

"ಅಲ್ಲ. ನನ್ನ ಹೆಸರು ಅಲೀ ಬಹದ್ದೂರ್!" ಎಂದನು ಅಲೀ ಅವಳ ಮುಖನೋಡಿ ನಗುತ್ತ. "ಚಿಂತಿಲ್ಲ. ನೀವೆಲ್ಲಾ ಇಂದು ನನ್ನ ಆತಿಥ್ಯ ಸ್ವೀಕರಿಸಬೇಕು. ತಯಾರಾಗಿದೆ, ಸ್ವೀಕರಿಸಿರಿ" ಎಂದು ಜೀನಾಬ್ ಅವರನ್ನು ಒಳಗಿನ ಕೋಣೆಗೆ ಕರೆದೊಯ್ದಳು. ಅವರೆಲ್ಲರೂ ಅತ್ಯುತ್ಸಾಹದಿಂದ ಸಾರಾಯಿ ಪೀಪಾಯಿಗಳ ಸುತ್ತಲೂ ಕುಳಿತು, ಸ್ವೇಚ್ಛೆಯಾಗಿ ತಿಂದೂ ಕುಡಿದೂ ಆನಂದಿಸಲು ತೊಡಗಿದರು. ಸಾರಾಯಿಯಲ್ಲಿ ಜೀನಾಬ್ ಧಂಡಿಯಾಗಿ ಭಂಗಿ ಬೆರೆಸಿದ್ದುದರಿಂದ ಬೇಗದಲ್ಲಿಯೇ ಆ ಹತ್ತುಮಂದಿಗಳಿಗೂ ಬೋಧ ತಪ್ಪಿ ಅಲ್ಲಲ್ಲಿ ಬಿದ್ದರು. ಜೀನಾಬ್ ಹಾಗೆ ಬಿದ್ದ ಒಬ್ಬೊಬ್ಬರನ್ನೇ ಕಾಲು ಹಿಡಿದು ಎಳೆದು ಆ ಸಾರಾಯಿ ಖಾನೆಯ ಹಿಂದಿನ ಕಸಗಪ್ಪು ವಠಾರಕ್ಕೆ ಒಯ್ದು, ಒಬ್ಬರ ಮೇಲೆ ಒಬ್ಬರನ್ನು ಪೇರಿಸಿ, ದೊಡ್ಡ ಬಟ್ಟೆಯನ್ನು ಅವರ ಮೇಲೆ ಮುಚ್ಚಿ, ದಿವಾಣ ಖಾನೆಯನ್ನು ಶುಭ್ರಗೊಳಿಸಿ ಮತ್ತೆ ತಲೆ ಬಾಗಿಲ ಹತ್ತಿರ ನಿಂತಳು. ಸ್ವಲ್ಪ ಹೊತ್ತಿಗೆ ಮತ್ತೊಂದು ಹತ್ತುಮಂದಿ

ಅಹ್ಮದನ ಭಟರು ಅಲ್ಲಿಗೆ ಬಂದರು. ಜೀನಾಬ್ ಅವರನ್ನು ಕೂಡಾ ನಗುನಗುತ್ತ ಆಹ್ವಾನಿಸಿ, ಕುಡಿಸಿ ಮತ್ತೇರಿಸಿ, ಮೊದಲಿನವರಿಗೆ ಮಾಡಿದ ಹಾಗೆಯೇ ಹಿಂಗಡೆಗೆ ಎಳೆದೊಯ್ದು ಪೇರಿಸಿಟ್ಟು ಬಟ್ಟೆ ಮುಚ್ಚಿದಳು. ಬೇಗದಲ್ಲೇ ಅಹ್ಮದನ ನಲುವತ್ತು ಮಂದಿ ಭಟರಿಗೂ ಅದೇ ಗತಿಯಾಯಿತು, ನಾಲ್ಕು ದಿಕ್ಕುಗಳಲ್ಲಿ ಶೋಧಮಾಡಿ ಬಂದವರ ಗತಿ ಹಾಗಾದ ಸ್ವಲ್ಪ ಹೊತ್ತಿನ ಮೇಲೆ, ಕುದುರೆಯ ಮೇಲೇರಿ ಕೊಂಡು ಅಹ್ಮದ್ ಕೂಡಾ ಅಲ್ಲಿಗೇ ಬಂದನು. ಬಾಗಿಲಲ್ಲಿ ನಿಂತ ಜೀನಾಬಳನ್ನು ನೋಡಿ, " ಏಯ್, ಛೋಕ್ರೀ ! ನನ್ನ ಭಟರಾರಾದರೂ ಇಲ್ಲಿಗೆ ಬಂದರೇ ? ನೋಡಿದಿಯಾ ?" ಎಂದು ಜೋರಾಗಿ ಕೇಳಿದನು.

" ತಾವೇನಾ ಕೋತ್ವಾಲ್ ಅಹ್ಮದರು ? ಹಾಗಾದರೆ ಬನ್ನಿ ಬನ್ನಿ. ತಮ್ಮ ಭಟರು ಈ ಬೀದಿಯ ಕೊನೆಯಲ್ಲಿ ಯಾವಳೋ ಮುದುಕಿಯನ್ನು ನೋಡಿದರಂತೆ. ಅವಳನ್ನು ಹಿಡಿಯಲು ಹೋದೆವೆಂದು ತಮ್ಮೊಡನೆ ಹೇಳಲು ಹೇಳಿದ್ದಾರೆ. ಅವರು ಅವಳನ್ನು ಹಿಡಿದುಕೊಂಡು ಬರುವುದರೊಳಗೆ ತಾವು ದಯ ಮಾಡಿ ನನ್ನ ಆತಿಥ್ಯ ಸ್ವೀಕರಿಸಬೇಕು. ಬನ್ನಿ ಹೀಗೆ !" ಎಂದಳು ಜೀನಾಬ್.

ಅಹ್ಮದ್ ಪರಮಾನಂದದಿಂದ, ಒಳಗೆ ಹೋಗಿ ತಿನ್ನಲೂ ಕುಡಿಯಲೂ ಪ್ರಾರಂಭಿಸಿ, ಭಂಗಿಯ ಪ್ರಭಾವದಿಂದ ಬೋದ ಕಳೆದುಕೊಂಡು ಒರಗಿ ಹೊರಳಿ ಬಿದ್ದನು. ಜೀನಾಬ್ ಅವನನ್ನು ಕಸಗಪ್ಪಿನ ವಠಾರಕ್ಕೆ ಸೇರಿಸಿ, ಅವನ ಶರೀರದಲ್ಲಿ ತುಂಡಂಗಿ, ಚಡ್ಡಿಗಳ ಹೊರತು ಉಳಿದ ದುಸ್ತುಗಳನ್ನೂ, ಆಭರಣಗಳನ್ನೂ ಅಪಹರಿಸಿಕೊಂಡಳು. ಉಳಿದ ನಲುವತ್ತು ಮಂದಿ ಭಟರನ್ನೂ ಹಾಗೆಯೇ ಮಾಡಿದಳು. ಅವರೆಲ್ಲರಿಂದ ದೋಚಿಕೊಂಡ ದುಸ್ತು ವಸ್ತುಗಳನ್ನೆಲ್ಲಾ ಅಹ್ಮದನ ಕುದುರೆಯ ಮೇಲೆ ಹಾಕಿಕೊಂಡು, ನೇರಾಗಿ ತನ್ನ ಮನೆಗೆ ಹೋಗಿ ಸೇರಿದಳು. ಅಹ್ಮದ್ ಮತ್ತು ನಲುವತ್ತು ಮಂದಿ ಭಟರೂ ಎರಡು ಹಗಲೂ ಎರಡು ರಾತ್ರಿಯೂ ನಿದ್ದೆಯಲಿದ್ದು ಮೂರನೇ ದಿನ ಬೆಳಿಗ್ಗೆ ಎಚ್ಚೆತ್ತರು. ಮೊದಲು



ಆವರಿಗೆ ತಾವು ಎಲ್ಲಿರುವೆವೆಂಬುದೇ ಗೊತ್ತಾಗಲಿಲ್ಲ. ಆದರೆ ಕ್ರಮವಾಗಿ ಸ್ಮೃತಿ ಬರುತ್ತಿದ್ದಂತೆ, ತಮಗೆ ನಡೆದ ಘೋರವಾದ ಅವಮಾನವು ಅರ್ಥವಾಗಿ ತಾಳಲಾಗದಷ್ಟು ನಾಚಿಗೆಯುಂಟಾಯಿತು. ದುಸ್ತುಗಳೇನೂ ಇಲ್ಲದೆ ಬೀದಿಯಲ್ಲಿ ಹೇಗೆ ಹೋಗುವುದೆಂದು ಅಹ್ಮದನಿಗೆ ಗೊತ್ತಾಗಲಿಲ್ಲ. ಹೋಗದಿರಲೂ ಸಾಧ್ಯವಿಲ್ಲ. ಕಡೆಗೆ ತುಂಡಂಗಿ ಚಡ್ಡಿಗಳೊಂದಿಗೆ ಅಹ್ಮದ್ ಮುಂದೆ ಹೊರಟನು. ಅವನ ಹಿಂದೆ ನಲುವತ್ತು ಮಂದಿ ಭಟರೂ ಬೀದಿಗೆ ಬಿದ್ದರು.

ಇನ್ನೂ ಅಹ್ಮದನ ಅದೃಷ್ಟ ಚೆನ್ನಾದಂತಿಲ್ಲ. ಸ್ವಲ್ಪ ದೂರ ಹೋಗುವಷ್ಟರಲ್ಲಿ ಹಸನ್ ಅವನಿಗೆ ಇದಿರಾಗಿ ಬರುತ್ತ, "ಇದೇನಿದೂ ಅಹ್ಮದ್ ? ಈ ಚಳಿಗಾಳಿಗೆ ಮೈಬಿಟ್ಟು ತಿರುಗುವುದು ಆರೋಗ್ಯಕ್ಕೆ ಒಳ್ಳೇದೆಂದು ಕೊಂಡೆಯಾ ?" ಎಂದು ಪ್ರಶ್ನಿಸಿದನು.

"ವಿಧಿ ! ಎಂಥವರಿಗೂ ವಿಧಿ ತಪ್ಪದಯ್ಯಾ ಹಸನ್ ! ಒಬ್ಬಳು ಹುಡುಗಿ ನನ್ನನ್ನು ಮೋಸಪಡಿಬಿಟ್ಟಳು. ಅವಳು ಯಾರೋ ಗೊತ್ತಾಗಿಲ್ಲ. ಮಹಾ ದಗಲಬಾಜೀ ಹುಡುಗಿ, ಗೊತ್ತೇನು ?" ಎಂದ ಅಹ್ಮದ್ ದೀನನಾಗಿ.

"ಓಹ್ ! ಅವಳೋ ! ಅವಳೂ ಗೊತ್ತು, ಅವಳಮ್ಮನೂ ಗೊತ್ತು ! ಹಿಡಿದು ಕೊಡಲೇನು ?" ಎಂದು ಕೇಳಿದ ಹಸನ್, "ಅದು ಹೇಗೆ ಸಾಧ್ಯ ?" ಎಂದು ಆಶ್ಚರ್ಯದಿಂದ ಕೇಳಿದ ಅಹ್ಮದ್.

"ಅದಕ್ಕೇನೂ ಕಷ್ಟವಿಲ್ಲ, ನೀನು ಸೀದಾ ಖಲೀಫರ ಬಳಿಗೆ ಹೋಗಿ ಈ ಕಾರ್ಯ ನಿನ್ನಿಂದಾಗುವುದಿಲ್ಲವೆಂದು ಹೇಳಿಬಿಡು. ಅದನ್ನು ಕೇಳಿ ಖಲೀಫರಿಗೆ ಸಿಟ್ಟು ಬಂದೀತು. ಆ ಕಾರ್ಯ ಸಾಧಿಸುವಂಥವನನ್ನು ಕರೆ ತಂದಿದ್ದೇನೆಂದು ನನ್ನ ಹೆಸರು ಹೇಳಿ ಬಿಡು. ಆಮೇಲೆ ನಾನು ನೋಡಿಕೊಳ್ಳುತ್ತೇನೆ" ಎಂದನು ಹಸನ್. ಅಹ್ಮದ್ ಖಲೀಫನ ಸನ್ನಿಧಿಗೆ ಹೋಗಿ ಅವನು ಹೇಳಿದ ಹಾಗೆಯೇ ಮಾಡಿದನು. ಕೂಡಲೇ ಖಲೀಫನು ಹಸನ್ನನ್ನು ಕರೆಯಿಸಿ "ನೀನು ಆ ಕಳ್ಳ ಮುದುಕಿಯನ್ನು ಹಿಡಿದು ತರುವಿಯಾ ? ಸಾಧ್ಯವೇ ?" ಎಂದು ಕೇಳಿದನು.





"ಅವಳು ಯಾರೆಂದು ನನಗೆ ಗೊತ್ತಾಗಿದೆ. ಅವಳು ಧನ ಲೋಭದಿಂದ ಈ ಕಳ್ಳತನಗಳನ್ನು ಮಾಡಿದಂತೆ ಕಾಣುವುದಿಲ್ಲ. ತನ್ನ ಪ್ರತಾಪವನ್ನು ತಮ್ಮ ಮಹಾಸನ್ನಿಧಿಗೆ ತೋರಿಸಲಿಕ್ಕಾಗಿಯೇ ಹೀಗೆ ಮಾಡಿರಬೇಕು, ಅವಳು ಕಳ್ಳತನ ಮಾಡಿದ ಸೊತ್ತುಗಳನ್ನೆಲ್ಲಾ ಹಿಂದಿರುಗಿ ಒಪ್ಪಿಸುವ ಷರತ್ತಿನ ಮೇಲೆ, ಅವಳಿಗೆ ತಾವು ಅಭಯ ಕೊಡುವ ಕೃಪೆ ದೋರಿದ ಪಕ್ಷದಲ್ಲಿ ಅವಳನ್ನು ಕರೆದು ತಂದು ಸನ್ನಿಧಾನದ ಇದಿರು ನಿಲ್ಲಿಸಬಲ್ಲೆನು" ಎಂದನು ಹಸನ್.

ಖಲೀಫನು ಹಾಗೆಯೇ ಅಭಯದಾನ ಮಾಡಿದನು. ಹಸನ್ ನೇರಾಗಿ ದಿಲ್ಲೈಲಾಳ ಮನೆಗೇ ಹೋಗಿ ಬಾಗಿಲು ತಟ್ಟಲು, ಜೇನಾಬ್ ಬಾಗಿಲು ತೆರೆದಳು. "ನಿನ್ನ ಅಮ್ಮನನ್ನು ಖಲೀಫರು ಬರಹೇಳಿದ್ದಾರೆಂದು ಹೇಳು. ಅವರಿಂದ ಅಭಯವನ್ನು ತಂದಿದ್ದೇನೆ. ನಿನ್ನ ಅಮ್ಮ ಅಪಹರಿಸಿ ತಂದ ಸಾಮಾನುಗಳನ್ನೆಲ್ಲಾ ಕುದುರೆಗಳ ಮೇಲೆ ಹಾಕಿಸು" ಎಂದನು ಹಸನ್.

ಮಗಳಿಂದ ಈ ಸಮಾಚಾರ ತಿಳಿದು, ದಿಲ್ಲೈಲಾ ಉಪ್ಪರಿಗೆಯಿಂದ ಇಳಿದು ಬಂದಳು. ಅವಳು ಅದುವರೆಗೆ ಅಪಹರಿಸಿದ ವಸ್ತುಸಾಮಗ್ರಿಗಳನ್ನೆಲ್ಲಾ ಕುದುರೆಗಳ ಮೇಲೆ ಏರಿಸಲಾಯಿತು. ದಿಲ್ಲೈಲಾ ತನಗಿರುವುದರಲ್ಲಿ ಒಳ್ಳೆಯ ಬಟ್ಟೆಗಳನ್ನು ಧರಿಸಿಕೊಂಡು ಖಲೀಫನ ದರ್ಶನಕ್ಕೆ ಸಿದ್ಧಳಾದಳು.

"ನೀನು ದೋಚಿಕೊಂಡದ್ದೆಲ್ಲವೂ ಬಂದುವೇ?" ಎಂದು ಕೇಳಿದನು ಹಸನ್.

"ಅಹ್ಮದ್ ಮತ್ತು ಅವನ ನಲುವತ್ತು ಮಂದಿ ಭಟರ ದುಸ್ತುಗಳ ಹೊರತು ಉಳಿದುವನ್ನೆಲ್ಲಾ ಕುದುರೆಗಳ ಮೇಲೆ ಏರಿಸಿದ್ದೇನೆ. ಸದ್ಯ ಇಷ್ಟು ಸಾಕು. ನಿಜಕ್ಕೂ ಹೇಳುತ್ತೇನೆ. ಕಳ್ಳತನಕ್ಕೂ ನನಗೂ ಯಾವ ಸಂಬಂಧವೂ ಇಲ್ಲ" ಎಂದಳು ದಿಲ್ಲೈಲಾ.

"ಹೌದೌದು. ಅದು ಇನ್ನೊಬ್ಬರ ಸಂಬಂಧದ್ದು" ಎಂದು ಹಸನ್ ನಕ್ಕನು. ಆಮೇಲೆ ಅವರಿಬ್ಬರೂ ಖಲೀಫನ ದರ್ಬಾರಿಗೆ ಹೋದರು.

ಮುದುಕಿಯನ್ನು ನೋಡಿದ ಕೂಡಲೇ ಖಲೀಫನು ಅತ್ಯುಗ್ರನಾಗಿ ಆವೇಶದಿಂದ "ಈ ಕಳ್ಳ ಮುದುಕಿಯ ತಲೆ ಕಡಿದುಬಿಡಿ" ಎಂದು ಅಪ್ಪಣೆ ಮಾಡಿದನು. ಕೂಡಲೇ ಹಸನ್ ಸವಿನಯದಿಂದ ಖಲೀಫನ ಅಭಯ ವಚನವನ್ನು ಜ್ಞಾಪಕಪಡಿಸಲು, ಖಲೀಫನು ಶಾಂತನಾಗಿ ಭಟರಿಗೆ ಬೇಡವೆಂದು ಸನ್ನೆದೋರಿಸಿ, "ನಿನ್ನ ಹೆಸರೇನು?" ಎಂದು ದಿಲ್ಲೈಲಾಳನ್ನು ಪ್ರಶ್ನಿಸಿದನು.

ದಿಲ್ಲೈಲಾ ವಿನಯದಿಂದ ಬಾಗಿ, "ಈ ಸನ್ನಿಧಾನದ ಅಡಿಯಾಳಾದ ಇವಳು ಪಾರಿವಾಳದ ಅಂಚೆ ಇಲಾಖೆಯನ್ನು ನಡೆಯಿಸಿದ ಅಧಿಕಾರಿಯ ಪತ್ನಿ. ಹೆಸರು ದಿಲ್ಲೈಲಾ" ಎಂದಳು.

"ನೀನು ಬಹಳ ಸಮರ್ಥಳಾಗಿ ಕಾಣುವೆ. ಇವರನ್ನೆಲ್ಲಾ ಏಕೆ ಮೋಸಪಡಿಸಿದೆ?" ಎಂದು ಖಲೀಫನು ಕೇಳಿದನು. ದಿಲ್ಲೈಲಾ ಖಲೀಫನ ಮುಂದೆ ಮಂಡಿಯೂರಿ ಬಿದ್ದದ್ದು," ಮಹಾಸನ್ನಿಧಾನವು

ಕ್ಷಮಿಸಬೇಕು. ನಾನು ಧನದ ಆಶೆಯಿಂದ ಕಳ್ಳತನಗಳನ್ನು ಮಾಡಿದ್ದೇ ಅಲ್ಲ. ಚೋರಕಾರ್ಯದಲ್ಲಿ ಮಹಾ ಸಮರ್ಥರಾದ ಅಹ್ಮದ್ ಹಸನ್‌ಗಳಿಗೆ ಸನ್ನಿಧಾನವು ದೊಡ್ಡ ಪದವಿಗಳನ್ನು ಕೊಟ್ಟ ಸಮಾಚಾರ ಕೇಳಿ, ನಾನು ಅವರಿಗಿಂತಲೂ ಹೆಚ್ಚು ಶಕ್ತಿಯನ್ನು ತೋರಿಸಿದರೆ, ನನ್ನ ಗಂಡ ಮಾಡಿಕೊಂಡು ಬಂದ ಪಾರಿವಾಳದ ಅಂಚೆ ಇಲಾಖೆಯನ್ನು ನನಗೆ ದಯ ಮಾಡಿಸುವಿರೇನೋ ಅಂದುಕೊಂಡೆನು " ಎಂದಳು.

ದಿಲ್ಲೈಲಾ ಹೇಳಿದ ಮಾತಿನಲ್ಲಿ ತಥ್ಯವಿರುವಂತೆ ಖಲೀಫನಿಗೆ ತೋರಿತು. ಅವನು ಮೊದಲು ಯಾರು ಯಾರ ಸೊತ್ತುಗಳನ್ನು ಅವರವರಿಗೆ ಕೊಡಿಸುವ ಏರ್ಪಾಡು ಮಾಡಿ, ಆಮೇಲೆ ದಿಲ್ಲೈಲಾಳೊಂದಿಗೆ " ನಿನ್ನ ಅಭಿಲಾಷೆ ಹೇಳು " ಎಂದನು.

" ಆಳುವವರು ಈ ಅಡಿಯಾಳಿನ ಪ್ರಾರ್ಥನೆಯನ್ನು ಲಾಲಿಸಬೇಕು. ನನಗೆ ನನ್ನ ಗಂಡನು ಮಾಡಿದ ಉದ್ಯೋಗವನ್ನೂ, ಸಂಬಳವನ್ನೂ ಕೊಡಿಸುವ ಕೃಪೆ ಮಾಡಬೇಕು. ಆ ಕೆಲಸ ನನಗೆ ಪೂರ್ತಿಯಾಗಿಯೂ ಚೆನ್ನಾಗಿಯೂ ಗೊತ್ತಿದೆ. ನಾನೂ ನನ್ನ ಕುಮಾರಿಯೂ ಕೂಡಿ ಪಾರಿವಾಳಗಳನ್ನು ಸಾಕುತ್ತಿದ್ದೆವು, ಅವುಗಳ ಕಾಲಿಗೆ ಪತ್ರಗಳನ್ನು ಕಟ್ಟಿ, ಆಳುವವರು ನಿಯಮಿಸಿದ ನಲುವತ್ತು ಮಂದಿ ಗುಲಾಮರೊಂದಿಗೆ, ನಲುವತ್ತು ಬೇಟೆನಾಯಿಗಳೊಂದಿಗೆ ಅಂಚೆ ಇಲಾಖೆಯನ್ನು ಸಕ್ರಮವಾಗಿ ನಡೆಸಿಕೊಂಡಿದ್ದವರು ನಾವೇ. ಗಂಡನು ನಮ್ಮ ತನಿಖೀದಾರರಾಗಿದ್ದರು ಅಷ್ಟೇ " ಎಂದಳು ದಿಲ್ಲೈಲಾ.

ಖಲೀಫನು ತಲೆಯೊಲಿದು ಕೂಡಲೇ ಆಜ್ಞಾಪತ್ರವನ್ನು ತಯಾರು ಮಾಡಿಸಿ, ದಿಲ್ಲೈಲಾಳನ್ನು ಪಾರಿವಾಳದ ಅಂಚೆ ಇಲಾಖೆಯ ನಿರ್ವಾಹಕಳಾಗಿ ನಿಯಮಿಸಿ, ನೀಗ್ರೋ ಗುಲಾರನ್ನೂ, ಬೇಟೆನಾಯಿಗಳನ್ನೂ ಅವಳವಶಕ್ಕೆ ಕೊಡಿಸಿದನು.

ದಿಲ್ಲೈಲಾ ಅತ್ಯಂತ ಸಂತೋಷದಿಂದ ಮನೆಗೆ ಹಿಂದಿರುಗಿ, ಮನೆಯಲ್ಲಿದ್ದ ಸಾಮಾನುಗಳನ್ನೆಲ್ಲಾ ಪಾರಿವಾಳದಂಚೇ ಇಲಾಖೆಗೆ ಸಾಗಿಸಿದಳು. ಆ ದಿನವೇ ಅವಳು ಗಂಡು ವೇಷ ಹಾಕಿಕೊಂಡು ತಲೆಯಲ್ಲಿ ಬೆಳ್ಳೀ ಪಾರಿವಾಳವಿರುವ ಬಂಗಾರದ ಟೋಪಿ ಧರಿಸಿ, ಅಂಚೆಗಳ ಸಂದೇಶಗಳನ್ನು ಸ್ವೀಕರಿಸಿ ತರಲು ರಾಜಭವನಕ್ಕೆ ಹೋದಳು. ನಲುವತ್ತು ಮಂದಿ, ನೀಗ್ರೋ ಗುಲಾಮರಿಗೂ ಕೆಂಪು ಜರೀ ದುಸ್ತುಗಳನ್ನು ಕೊಡಿಸಿದಳು. ತನ್ನ ಹೊಸ ಭವನದಲ್ಲಿ ಅಲಂಕಾರವಾಗಿರಲೆಂದುಕೊಂಡು ನಲುವತ್ತು ಆಣಿಗಳನ್ನು ಹೊಡೆಯಿಸಿ, ಅವುಗಳಲ್ಲಿ ಅಹ್ಮದನ ಮತ್ತು ಗೂನಿ ಅಲೀಯ ದುಸ್ತುಗಳನ್ನೂ, ಉಳಿದ ಮೂವತ್ತೊಂಬತ್ತು ಮಂದಿ ಭಟರ ದುಸ್ತುಗಳನ್ನೂ ನೇತಾಡಿಸಿದಳು. (ಇನ್ನೂ ಇದೆ)






೭

ದಿಲೈಲಾ ಜೀನಾಬ್ ಎಂಬ ತಾಯಿ ಮಗಳಂದಿರ ಮೋಸಗಳ ಪರಂಪರೆ ನಡೆದ ಸ್ವಲ್ಪ ಕಾಲದ ಮೇಲೆ ಕೈರೋ ನಗರದಿಂದ "ಪಾದರಸ" ಎಂಬ ಸಾರ್ಥಕವಾದ ನಾಮಾಂತರ ಪಡೆದ ಯುವಕನೊಬ್ಬ ಬಾಗ್ದಾದ್ ನಗರಕ್ಕೆ ಬಂದು ಸೇರಿದನು. ಅಲೀ ಎಂಬುದು ಅವನ ನಿಜವಾದ ಹೆಸರು. ಅವನು ಬಹಳ ಸುಂದರ ಪುರುಷನಾಗಿದ್ದರೂ ಚೋರಾಗ್ರೇಸರ. ಕೈರೋ ಅವನ ಸ್ವಂತ ಸ್ಥಳವಾಗಿತ್ತು. ಈಗ ಬಾಗ್ದಾದಿನಲ್ಲಿ ಕೋತ್ವಾಲನಾಗಿ ಅಧಿಕಾರ ಪಡೆದ ಅಹ್ಮದನು, ಹಿಂದೆ ಕೈರೋದಲ್ಲಿ ಪ್ರಚಂಡ ಚೋರನಾಗಿದ್ದಾಗ, ಈ ಪಾದರಸನು ಅವನ ಹತ್ತಿರ ಚೋರವಿದ್ಯೆ ಕಲಿತಿದ್ದ. ಅಹ್ಮದ್ ಬಾಗ್ದಾದಿಗೆ ಬಂದು ಭಾರಿ ದೊಡ್ಡ ಕಳ್ಳನೆಂದು ಕೀರ್ತಿ ಸಂಪಾದಿಸಿ ಕೊಂಡ ಮೇಲೆ, ಖಲೀಫನಿಂದ ಕೋತ್ವಾಲ ಪದವಿಯನ್ನು ಪಡೆದನು. ಆಗ ಕೈರೋದಲ್ಲಿ ಪಾದರಸನು ಅಲ್ಲಿಯ ಕಳ್ಳರಿಗೆಲ್ಲ ನಾಯಕನಾಗಿದ್ದನು. ಅವನು ಅನೇಕ ಸಾರಿ ಸಿಕ್ಕಿಬಿದ್ದರೂ, ತಪ್ಪಿಸಿಕೊಂಡು ಹೋದುದರಿಂದ ಜನರೆಲ್ಲಾ ಅವನನ್ನು "ಕಳ್ಳಪಾದರಸ" ಅನ್ನುತ್ತಿದ್ದರು.

ಅಲೀ ಪಾದರಸನನ್ನು ಅಹ್ಮದನೇ ಬಾಗ್ದಾದಿಗೆ ಬರಲು ಹೇಳಿದ್ದನು. ದಿಲೈಲಾಳನ್ನು ಹಿಡಿಯಲಿಕ್ಕಾಗದೆ ಪರಾಭವವನ್ನು ಅನುಭವಿಸಿದಂದಿನಿಂದಲೂ ಅಹ್ಮದನಿಗೆ ಪ್ರತಿಕ್ಷಣಕ್ಕೂ ಪಾದರಸನ ನೆನಪು ಬರತೊಡಗಿತು. ಅವನು ತನಗೆ ಬಲಭುಜದ ಹಾಗಿನವನು. ಅವನು ತನ್ನೊಂದಿಗಿರುತ್ತಿದ್ದರೆ ತನಗೆ ಇಂತಹ ಪರಾಜಯವು ಬರುತ್ತಿದ್ದಿಲ್ಲವೆಂದು ಅವನಿಗೆ ತೋರುತ್ತಿತ್ತು. ಅದೂ ಅಲ್ಲದೆ ಈಗ ಎಲ್ಲಾ ಬಟ್ಟ ಬಯಲಾಗಿ ಹೋದುದರಿಂದ ಅಹ್ಮದನು ದಿಲೈಲಾಳ ಮೇಲೆ ಸ್ವಂತವಾಗಿ ಹಗೆ ತೀರಿಸಿಕೊಳ್ಳಲು ಸಾಧ್ಯವಿಲ್ಲ. ಈಗ ಅವಳಿಗೆ ತನಗಿರುವಂತಹ ಪದವಿಯ ಮಹತ್ವವೇ ಬಂದಿದೆ. ಆದ್ದರಿಂದ ಈ ಕಾರ್ಯಕ್ಕೆ ಪಾದರಸನೇ ಸರಿಯಾದವನು.

ಅಲೀ ಪಾದರಸನು ತನ್ನ ಗುರು ಅಹ್ಮದನ ಆಹ್ವಾನದಂತೆ ನೇರಾಗಿ ಅಹ್ಮದನ ಮನೆಗೇ ಬಂದುಬಿಟ್ಟನು. ಅವನನ್ನು ನೋಡಿದ ಕೂಡಲೇ ಅಹ್ಮದನಿಗೆ ಮುದುಡಿದ ಜೀವಕ್ಕೆ ನೀರೆರೆದಂತಾಯಿತು. "ತಮ್ಮಾ, ನೀನು ನನ್ನ ಮನೆಯಲ್ಲಿ ಕೆಲವು ದಿನ ರಹಸ್ಯವಾಗಿ



ಇದ್ದುಬಿಡು: ನಿನ್ನಿಂದ ಒಂದು ಕೆಲಸವಾಗ ಬೇಕಾಗಿದೆ. ಆ ಕೆಲಸ ಮುಗಿದ ಮೇಲೆ ನಿನ್ನನ್ನು ಖಲೀಫರ ಬಳಿಗೆ ಬಹಿರಂಗವಾಗಿ ಕರೆದುಕೊಂಡು ಹೋಗಿ ಶಿಫಾರಸು ಮಾಡಿ ಬಳ್ಳಿಯ ಸಂಬಳವಿರುವ ಉದ್ಯೋಗ ಕೊಡಿಸುತ್ತೇನೆ. ದೊಡ್ಡ ಮನುಷ್ಯನಾಗಿ ಬಾಳಬಹುದು " ಎಂದನು ಪಾದರಸನೊಂದಿಗೆ ಅಹ್ಮದ್. ಅದರಂತೆ ಪಾದರಸನು ಅಹ್ಮದನ ಮನೆಯೊಳಗೆ ಎರಡು ದಿನಗಳನ್ನು ಕಳೆದನು. ಆಮೇಲೆ ಅವನಿಗೆ ಆ ಮನೆಯೊಂದು ಜೈಲಿನ ಹಾಗೆ ತೋರಿತು. ಮೂರನೇ ದಿನ ಅಹ್ಮದ್ ತನ್ನ ಉದ್ಯೋಗದ ದಿವಾಣಕ್ಕೆ ಹೊರಟು ಹೋದ ಮೇಲೆ, ಪಾದರಸನು ಮನೆಯಿಂದ ಹೊರಗೆ ಜಾರಿಕೊಂಡನು. ಬಾಗ್ದಾದ್ ನಗರದ ನಾಲ್ಕು ಮೂಲೆಗಳವರೆಗೂ ತಿರುಗಾಡಿ ಬರಬೇಕೆಂಬುದು ಅವನ ಉದ್ದೇಶವಾಗಿತ್ತು.

ಅವನು ಸ್ವಲ್ಪದೂರ ಹೋಗುವಷ್ಟರಲ್ಲಿ ಗಂಡು ಉಡುಪುಗಳನ್ನು ಧರಿಸಿ, ತಲೆಯಲ್ಲಿ ಬೆಳ್ಳಿಯ ಪಾರಿವಾಳವಿರುವ ಬಂಗಾರದ ಟೋಪಿಯನ್ನಿಟ್ಟುಕೊಂಡು ಕುದುರೆಯ ಮೇಲೆ ಕುಳಿತು ಮುದುಕಿಯೊಬ್ಬಳು ಎಲ್ಲಿಗೋ ಹೋಗುತ್ತಿರುವುದನ್ನು ನೋಡಿದನು. ಅವಳ ಹಿಂದೆ ಕೆಂಪು ಜರತಾರೀ ದುಸ್ತುಗಳನ್ನು ಧರಿಸಿದ ನಲುವತ್ತು ಮಂದಿ ನೀಗ್ರೋ ಗುಲಾಮರೂ ಇದ್ದರು. ಇವರು ಬೇರೆಯಾರೂ ಅಲ್ಲ; ದಿಲ್ಲೈಲಾ ಮತ್ತು ಅವಳ ನೌಕರರೇ. ಅವಳು ಆ ದಿನ ಬೆಳಿಗ್ಗೆ ತಾನು ಮಾಡಬೇಕಾದ ಟಪಾಲು ಶೇಖರಣೆಗಾಗಿ ದಿವಾಣದ ವಾರ್ತಾಶಾಖೆಗೆ ಹೋಗಿ ಅಲ್ಲಿಂದ ತನ್ನ ಮನೆಗೆ ಹಿಂದಿರುಗುತ್ತಿದ್ದಳು.

ದಿಲ್ಲೈಲಾ ಪಾದರಸನ ಹೊಸ ಮುಖವನ್ನು ನೋಡಿ ಅವನ ಸೌಂದರ್ಯಕ್ಕೆ ಬೆರಗಾದಳು. ಅವಳ ತೀಕ್ಷ್ಣ ದೃಷ್ಟಿಗೆ ಅವನ ಮುಖದ ಭಾವಭಂಗಿಗಳು ಕಳ್ಳಗುಣದ ಅಹ್ಮದನನ್ನು ನೆನಪಿಗೆ ತಂದುವು. ನಿಜಕ್ಕೂ ಪಾದರಸನು ಅಹ್ಮದನ ಶಿಷ್ಯನಾಗಿದ್ದಾಗ, ಅವನ ಹಾವಭಾವ, ನೋಟ, ಮುಖಭಂಗಿಗಳಲ್ಲಿ ಅವನಿಗೆ ತಿಳಿಯದಂತೆಯೇ ಅಹ್ಮದನ ರೀತಿಗಳು ಅಭ್ಯಾಸವಾಗಿದ್ದುವು. ಅಲ್ಲದೆ ಅವನು ಅಹ್ಮದನ ಮನೆ ಕಡೆಯಿಂದಲೇ ಹೊರಬಿದ್ದುದನ್ನು ಕೂಡಾ ದಿಲ್ಲೈಲಾ ಗಮನಿಸಿದಳು. ಅಹ್ಮದನ ಮನೆಗೆ ಈ ಹೊಸಬನು ಬಂದುದರಿಂದ, ತಾನು ಸ್ವಲ್ಪ ಎಚ್ಚರದಲ್ಲಿರಬೇಕಾಯಿತೆಂದುಕೊಂಡಳು.

ದಿಲ್ಲೈಲಾ ಮನೆಗೆ ಹೋದ ಕೂಡಲೇ ತನ್ನ ಕುಮಾರಿ ಜೀನಾಬಳೊಂದಿಗೆ ತಾನು ನೋಡಿದ ಯುವಕನನ್ನು ವರ್ಣಿಸಿ ಹೇಳಿ, "ಕಳ್ಳ ಅಹ್ಮದ್ ಈ ಯುವಕನನ್ನು ಕರೆಯಿಸಿಕೊಂಡಿದ್ದಾನೆಂದು ಕಾಣುತ್ತೆ. ಅವನು ಬೀದಿಗಳನ್ನು ಆಶ್ಚರ್ಯದಿಂದ ಪರೀಕ್ಷಿಸುವುದನ್ನು ನೋಡಿದರೆ ಈ ದಿನವೋ ನಿನ್ನೆಯೋ ಇಲ್ಲಿಗೆ ಬಂದಿರಬೇಕೆನಿಸುತ್ತೆ. ಎಷ್ಟಾದರೂ ಅಹ್ಮದನಿಗೆ ನಮ್ಮ ಮೇಲೆ ಹಗೆ ಇದೆ. ನಾವು ಈ ಹೊಸಬನ ವಿಷಯದಲ್ಲಿ ಜಾಗರೂಕರಾಗಿರಬೇಕು " ಎಂದಳು.

ತಾಯಿಯ ಮಾತು ಕೇಳಿ ಜೀನಾಬ್ ಸ್ವಲ್ಪ ಹೊತ್ತು ಆಲೋಚಿಸಿ, "ಏನಮ್ಮಾ ನಿನ್ನ ಮಾತು? ಎಂತೆಂಥವರನ್ನೆಲ್ಲಾ ಲಕ್ಷ್ಯ ಮಾಡದಿರುವ ನೀನು ಇನ್ನೂ ಗಡ್ಡಮೀಸೆ ಸರಿಯಾಗಿಬಾರದ ಒಬ್ಬ ಹುಡುಗ ನನ್ನು ನೋಡಿ ಹೆದರುವಿಯಾ?" ಎಂದಳು. ಅವಳು ತನ್ನನ್ನು ಸುಂದರವಾಗಿ ಅಲಂಕರಿಸಿಕೊಂಡು, ಕಣ್ಣುಗಳಿಗೆ ಕಾಡಿಗೆಗೆರೆಯನ್ನು ತಿದ್ದಿ, ಮುಖಕ್ಕೆ ಪಾರದರ್ಶಕವಾದ ಬುರಖಾ ಹಾಕಿಕೊಂಡು, ಕೈಯಲ್ಲಿ ಅಂದವಾದ ಚೀಲ ಹಿಡಿದು ನಡೆಯುವ ಮಿಂಚಿನ ಬಳ್ಳಿಯ ಹಾಗೆ ಬೀದಿಯಲ್ಲಿ ನಡೆದಳು.

ಜೀನಾಬ್ ಮೆಲ್ಲನೆ ಅತ್ತ ಇತ್ತ ಗಮನಿಸಿಕೊಂಡು ನಡೆಯುತ್ತ, ಸ್ವಲ್ಪ ದೂರ ಹೋಗಲು, ಒಂದು ಅಂಗಡಿಯ ಮುಂದೆ ನಿಂತಿದ್ದ ಪಾದರಸನನ್ನು ನೋಡಿದಳು. ತಾಯಿ ಹೇಳಿದ ವರ್ಣನೆಯ ಮೇಲಿಂದ ಅವನ ಗುರುತು ಹಿಡಿದು, ಅವನ ಬದಿಯಲ್ಲಿ ದೂಡಿದ ಹಾಗೆ ಮುಂದಕ್ಕೆ ಹೋಗಿ ಹಿಂದಿರುಗಿ ಹುಬ್ಬುಗಂಟಿಕ್ಕಿ "ಮುಖದಲ್ಲಿ ಕಣ್ಣಿಲ್ಲದವನು!" ಎಂದಳು ಕೋಪದಿಂದ. ಪಾದರಸನು ಅವಳನ್ನು ನೋಡಿ ಅವಳ ಸೌಂದರ್ಯಕ್ಕೆ ಆಶ್ಚರ್ಯಪಟ್ಟು, ಮುಗುಳುನಗುತ್ತ "ಇಂಥಾ ಸೌಂದರ್ಯ ಪ್ರಕಾಶಕ್ಕೆ ಕಣ್ಣು ಕುರುಡಾಗದಿರುತ್ತೆಯೆ? ಯಾರ ಕಡೆಯವಳು ನೀನು?" ಎಂದನು. "ನಾನು ಒಬ್ಬ ವರ್ತಕನ ಕುಮಾರಿ, ಇನ್ನೊಬ್ಬ ವರ್ತಕನಿಗೆ ಹೆಂಡತಿ. ನಿಮ್ಮ ರೀತಿ ನೋಡಿದರೆ ಈ ಊರಿಗೆ ಹೊಸಬರಾದಂತಿದೆ, ಎಲ್ಲಿ ನಿಮ್ಮ ವಾಸ?" ಎಂದು ಕೇಳಿದಳು ಜೀನಾಬ್.

ಅಹ್ಮದನ ವಿಷಯವನ್ನು ಹೇಳಬಾರದೆಂದುಕೊಂಡು ಪಾದರಸನು "ಇನ್ನೂ ವಾಸ್ತವ್ಯವು ಗೊತ್ತಾಗಲಿಲ್ಲ. ಎಲ್ಲಾದರೂ ಇದೆಯೋ ಹುಡುಕಿ ನೋಡುತ್ತಾ ಇದ್ದೇನೆ" ಎಂದನು.

"ಹಾಗಾದರೆ ನಮ್ಮ ಮನೆಗೆ ಬನ್ನಿ. ನಮ್ಮದು ತುಂಬಾ ದೊಡ್ಡ ಮನೆ. ನನ್ನ ಗಂಡ ಅಂಗಡಿಗೆ ಹೋದರೆ, ಮನೆಯಲ್ಲಿ ನನಗೆ ಜತೆ ಯಾರೂ ಇರೋದಿಲ್ಲ. ಹೆದರಿಕೊಂಡು ಒಬ್ಬಳೇ ಇರಬೇಕಾಗಿದೆ" ಎಂದಳು ಜೀನಾಬ್.





ಅವಳ ಮನೆಯಲ್ಲಿರುವುದು ಒಳ್ಳೆಯದೋ ಕೆಟ್ಟದೋ ಎಂಬ ಅನುಮಾನದಲ್ಲಿ ಪಾದರಸನು ಮೇಲೆ ಕೆಳಗೆ ನೋಡಿದನು. ಈ ನಗರದಲ್ಲಿ ತನ್ನ ಪರಿಚಯದವರು ಯಾರೂ ಇಲ್ಲವೆಂದೂ, ಈ ಹುಡುಗಿ ತನಗೆ ಆಗದವಳೆನ್ನಲು ಯಾವ ಕಾರಣವೂ ಇಲ್ಲವೆಂದೂ ಅಂದುಕೊಂಡು, ಅವಳ ಮನೆಗೆ ಹೋಗಿ ಇವಳೆಂಥವಳೋ ತಿಳಿಯೋಣವೆನಿಸಿತು ಅವನಿಗೆ.

ಅವನು ಆಗಲೆಂದು ತಲೆಯಾಡಿಸಿದ ಮೇಲೆ, ಜೀನಾಬ್ ಅವನನ್ನು ಕೆಲವು ಬೀದಿಗಳಲ್ಲಿ ತಿರುಗಿಸಿ ದೊಡ್ಡದೊಂದು ಮನೆಯ ಮುಂದೆ ನಿಂತು, ಬೀಗದ ಕೈಗಾಗಿ ತನ್ನ ಚೀಲವನ್ನು ಹುಡುಕ ತೊಡಗಿದಳು. ಅದೊಂದು ದೊಡ್ಡ ವರ್ತಕನ ಮನೆಯಾಗಿತ್ತು. ಪ್ರಸ್ತುತ ಮನೆಯಲ್ಲಿ ಯಾರೂ ಇರಲಿಲ್ಲ. ವರ್ತಕನು ಬೆಳಿಗ್ಗೆ ಮನೆಗೆ ಬೀಗ ಹಾಕಿ ಅಂಗಡಿಗೆ ಹೋದರೆ ರಾತ್ರಿಗಷ್ಟೇ ಹಿಂದಿರುಗುವನು. ಅವನ ಹೆಂಡತಿ ಮಕ್ಕಳು ತೌರಿಗೆ ಹೋಗಿದ್ದಾರೆ. ಈ ಸಂಗತಿಗಳೆಲ್ಲಾ ಜೀನಾಬ್‌ಗೆ ಗೊತ್ತಿತ್ತು. "ಅಯ್ಯಯ್ಯೋ! ಈಗೇನು ಗತಿ! ಬೀಗದ ಕೈ ಎಲ್ಲೋ ಬಿದ್ದುಹೋಯಿತು. ಇದನ್ನು ಹೇಗೆ ತೆಗೆಯಲಿ? ನಿಮ್ಮಿಂದೇನಾದರೂ ಸಾಧ್ಯವೇ?" ಎಂದು ಜೀನಾಬ್ ಪಾದರಸನ ಮುಖ ನೋಡಿದಳು.

"ನೋಡುತ್ತೇನೆ" ಎಂದು ಹೇಳಿ ಪಾದರಸನು ಅಷ್ಟು ದೊಡ್ಡ ಅಂಡೆ ಬೀಗವನ್ನು ಹೀಗೆ ತಟ್ಟಿ ಹಾಗೆ ಒತ್ತಿ, ಕೆಳಗಿದ್ದೊಂದು ಕೋಲಿನ ಕೊಕ್ಕೆ ಹಾಕಿ ಗಡಗಡ ಮಾಡಿಸಿ ತೆಗೆದುಬಿಟ್ಟನು. ಇವನೊಬ್ಬ ಪಕ್ಕಾ ಕಳ್ಳನೆಂದು ಜೀನಾಬಳಿಗೆ ಗೊತ್ತಾಯಿತು.

ಇಬ್ಬರೂ ಒಳಗೆ ಹೊಕ್ಕರು. "ನೀವು ಈ ಕೋಣೆಯ ಆಸನದಲ್ಲಿ ಕುಳಿತಿರಿ. ನಾನು ಬಾವಿಯಿಂದ ನೀರು ಸೇದಿ ತಂದು ಅಡಿಗೆ ಮಾಡುತ್ತೇನೆ." ಎಂದು ಹೇಳಿ ಜೀನಾಬ್ ಬಿಂದಿಗೆ ಎತ್ತಿಕೊಂಡು ಹಿಂಬದಿಯಲ್ಲಿರುವ ಬಾವಿಯ ಹತ್ತಿರ ಹೋದಳು.

ಸ್ವಲ್ಪ ಹೊತ್ತಿಗೆ ಜೀನಾಬ್ ಬಾವಿಯ ಹತ್ತಿರ ಕೆಟ್ಟ ಸ್ವರದಿಂದ ಕೂಗಿದಳು. ಏನಾಯಿತೋ ಎಂದು ಹೆದರಿ ಪಾದರಸನು ಅವಳ ಬಳಿಗೆ ಓಡಿದನು. ಅವಳು ಬಾವಿಯೊಳಗೆ ಹಗ್ಗ ಇಳಿಸಿ ಬಗ್ಗಿ ನೋಡುತ್ತಾ ಇದ್ದಳು. "ಏನಾಯಿತು?" ಎಂದು ಪಾದರಸನು ಆತುರದಿಂದ ಕೇಳಿದನು.

"ನನ್ನ ವಜ್ರದುಂಗುರ! ಐನೂರು ದಿನಾರು ಸುರಿದು ನನ್ನ ಗಂಡ ನಿನ್ನೆ ತಾನೇ ತಂದದ್ದು. ಸ್ವಲ್ಪ ಸಡಿಲಾಗಿದೆ ಅಂತ ಆಗಲೇ ಹೇಳಿದೆ. ತೆಗೆದಿಟ್ಟು ಬಾವಿಗೆ ಬಿಂದಿಗೆ ಇಳಿಸಬೇಕಿತ್ತು. ಫಕ್ಕನೆ ಜಾರಿ ಬಾವಿಗೆ ಬಿತ್ತಲ್ಲಾ! ಗಂಡನಿಗೆ ಗೊತ್ತಾದರೆ ಪ್ರಾಣ ತೆಗೀತಾರೆ!" ಎಂದು ಜೀನಾಬ್ ತತ್ತರಿಸಿಕೊಂಡು ಬಿಕ್ಕಿ ಬಿಕ್ಕಿ ಹೇಳಿದಳು.

"ಏನೂ ಹೆದರಬೇಡ. ಈಗ ತಾನೇ ಬಿದ್ದದ್ದು ಕೆಸರಿನ ಮೇಲೆ ಇರುತ್ತೆ, ಇಳಿದು ತರುತ್ತೇನೆ" ಎಂದು ಪಾದರಸನು, ದುಸ್ತು ಕಳಚಿ, ರಾಟೆಯ

ದಿಂಡಿಗೆ ಹಗ್ಗವನ್ನು ಕಟ್ಟಿ, ಅದನ್ನು ಹಿಡಿದುಕೊಂಡು ಬಾವಿಯೊಳಗೆ ಇಳಿದನು. ಹಗ್ಗವನ್ನು ಬಿಟ್ಟು ಅವನು ನೀರಿನಲ್ಲಿ ಮುಳುಗಿದ ಕೂಡಲೇ, ಜೀನಾಬ್ ಹಗ್ಗವನ್ನು ಮೇಲಕ್ಕೆ ಎಳೆದು ಹಾಕಿ, "ಇನ್ನು ನಿನ್ನನ್ನು ಅಹ್ಮದ್ ಬಂದು ಮೇಲೆತ್ತುತ್ತಾನೆ. ಅದುವರೆಗೆ ಬಾವಿಯಲ್ಲೇ ತಣ್ಣಗಿರು" ಎಂದು ಹೇಳಿ ಅವನ ದುಸ್ತುಗಳನ್ನು ತೆಗೆದುಕೊಂಡು ತನ್ನ ಮನೆಗೆ ಹೊರಟು ಹೋದಳು.

ಆ ರಾತ್ರಿ ಆ ಮನೆಯ ಯಜಮಾನನಾದ ವರ್ತಕನು ಬಹಳ ತಡವಾಗಿ ತನ್ನ ನೌಕರನೊಂದಿಗೆ ಮನೆಗೆ ಬಂದನು. ಮನೆಯ ಬಾಗಿಲು ಸುಮ್ಮನೆ ಮುಚ್ಚಿರುವುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಒಳಗೆಲ್ಲಾ ಪರೀಕ್ಷಿಸಿ ನೋಡಿದ ಮೇಲೆ ಕಳ್ಳತನವಾಗಿಲ್ಲವೆಂಬುದು ಗೊತ್ತಾಗಿ ಸ್ವಲ್ಪ ಸಮಾಧಾನವಾಯಿತು.

ವರ್ತಕನ ಸ್ನಾನಕ್ಕಾಗಿ ನೌಕರನು ಬಾವಿಗೆ ಹಗ್ಗ ಇಳಿಸಿ ನೀರು ಸೇದಲು ನೋಡಿದನು. ಎಳೆಯುವಾಗ ನೀರಿನ ಬಿಂದಿಗೆ ವಿಪರೀತ ಭಾರವಾಗಿರುವುದನ್ನು ನೋಡಿ, ದಮ್ಮು ಬಿಗಿದು ಎಳೆಯುತ್ತ ದೆವ್ವದ ನೆನಪು ಬಂದು, ಹೆದರಿ ಹಗ್ಗವನ್ನು ಬಾವಿಯ ಕಂಬಕ್ಕೆ ಸುತ್ತಿ, "ಯಾವುದೋ ದೆವ್ವ ದೊರೆಗಳೇ !" ಎಂದು ಕೂಗುತ್ತಾ, ಗಾಬರಿಯಿಂದ ಓಡಿದನು. ಅವನ ಕೂಗು ಕೇಳಿ ವರ್ತಕನು ದೀಪ ತೆಗೆದುಕೊಂಡು ಬಾವಿಯ ಹತ್ತಿರ ಬಂದು, ಹಗ್ಗ ಹಿಡಿದುಕೊಂಡು ಮೇಲೆ ಏರುತ್ತಿರುವ ಪಾದರಸನನ್ನು ನೋಡಿ ಕೋಪದಿಂದ, "ಬದ್ಮಾಷ್! ಯಾರು ನೀನು? ನಮ್ಮ ಬಾವಿಯಲ್ಲಿ ನಿನಗೇನು ಕೆಲಸ ? ಹೇಳು ! ಈಗಲೇ ನಿನ್ನನ್ನು ಭಟರಿಗೆ ಒಪ್ಪಿಸುತ್ತೇನೆ" ಎಂದು ಬೈ ದಾಡಿದನು.

"ಅಯ್ಯಾ, ಇದು ಯಾವ ದೇಶ ? ಯಾವ ಗ್ರಾಮ ? ನಾನು ಈಜಿಪ್ಟು ದೇಶದವನು. ನಮ್ಮ ನೈಲ್ ನದಿಯಲ್ಲಿ ಸ್ನಾನಮಾಡುತ್ತಾ ಇರುವಾಗ ದೊಡ್ಡದೊಂದು ಸುಳಿಗುಂಡವು ನನ್ನನ್ನು ಕೆಳಕ್ಕೆ ಎಳೆಯಿತು. ನಾನು ಎಷ್ಟು ಆಳಕ್ಕೆ ಹೋದೆನೋ ನನಗೇ ಗೊತ್ತಿಲ್ಲ. ಮತ್ತೆ ನೀರಿನ ಮೇಲೆ ತೇಲುವಾಗ ಈ ಬಾವಿಯಲ್ಲಿದ್ದೇನೆ !" ಎಂದು ಪಾದರಸನು ಅದ್ಭುತವಾಗಿ ಸುಳ್ಳಾಡಿದನು.

ಅವನ ಸುಳ್ಳನ್ನು ವರ್ತಕನು ನಂಬಿದುದರಿಂದ ಕೋಪವೆಲ್ಲಾ ಇಳಿದು, ಪರಿತಾಪವಾಗಿ ಮಾರ್ಪಟ್ಟಿತು. "ಅಪ್ಪಾ, ನಿನ್ನ ಅನುಭವ ಬಹಳ ವಿಚಿತ್ರವಾಗಿದೆ. ಇದು ಬಾಗ್ದಾದ್ ನಗರ. ಬಹಳ ದೂರಕ್ಕೆ ಬಂದಿರುವಿ. ಮೊದಲು ಒಣಬಟ್ಟೆ ಕೊಡುತ್ತೇನೆ, ಕಟ್ಟಿಕೋ. ಈ ರಾತ್ರಿ ಇಲ್ಲೇ ಊಟ ಮಾಡಿ ಮಲಗು. ನಾಳೆ ನಿನ್ನ ನಗರಕ್ಕೆ ಪ್ರಯಾಣ ಮಾಡಬಹುದು" ಎಂದನು ವರ್ತಕ.

(ಇನ್ನೂ ಇದೆ)





# ಇಬ್ಬರು ಮೋಸಗಾತಿಯರು

೭

ಮರುದಿನ ಪಾದರಸ ಅಲೀ ಮನೆಗೆ ಬಂದುದನ್ನು ನೋಡಿ ಅಹ್ಮದನ ಪ್ರಾಣ ಚೇತರಿಸಿಕೊಂಡಿತು. ತನ್ನ ಪ್ರಿಯಶಿಷ್ಯನ ಜಾಡು ತಿಳಿಯದೇ ಹೋದುದರಿಂದ ಅಹ್ಮದ್ ಚಿಂತೆಯಿಂದ ಊಟ ತಿಂಡಿಗಳನ್ನು ಬಿಟ್ಟು ರಾತ್ರಿ ಸರಿಯಾಗಿ ನಿದ್ದೆ ಕೂಡಾ ಮಾಡದೆ ಗಾಬರಿಯಲ್ಲಿದ್ದನು.

ಬೆಳಗಾದ ಕೂಡಲೇ ತನ್ನ ಹಾಗೆಯೇ ಕೊತ್ವಾಲನಾಗಿರುವ ಹಸನನನ್ನು ಕರೆಯಿಸಿ ಅವನ ಆಲೋಚನೆ ಕೇಳಿದನು. ಅವರಿಬ್ಬರೂ ಮಾತಾಡಿಕೊಂಡಿರುವಾಗಲೇ ಪಾದರಸನು ಮನೆಗೆ ಬಂದು ಸೇರಿದನು. ಅವನು ಕ್ಷೇಮವಾಗಿರುವುದನ್ನು ನೋಡಿ ಅಹ್ಮದನಿಗೆ ಸಮಾಧಾನವಾಯಿತು.

ಪಾದರಸ ಅಲೀ ತನ್ನ ಅನುಭವಗಳನ್ನು ಆ ಇಬ್ಬರು ಕೊತ್ವಾಲರಿಗೂ ವಿವರವಾಗಿ ಹೇಳಿದನು. ಅದನ್ನೆಲ್ಲ ಕೇಳಿ ಹಸನ್ ಕಿರುನಗುವಿನೊಂದಿಗೆ "ಇಂಥಾ ಕೆಲಸ ಮಾಡುವಂಥ ಹುಡುಗಿ ಈ ಬಾಗ್ದಾದ್ ನಗರದಲ್ಲಿ ಒಬ್ಬಳೇ ಒಬ್ಬಳಿದ್ದಾಳೆ. ಪಾರಿವಾಳಗಳ ಟಪಾಲು ಖಾತೆಯನ್ನು ನಿರ್ವಹಿಸುವ ದಿಲ್ಲೈಲಾಳ ಮಗಳು ಜಿನಾಬ್ ಎಂಬವಳು! ಎಂಥವರಿಗೂ ಮಣ್ಣು ಮುಕ್ಕಿಸುವವಳು! ಹೌದು, ಆ ಹುಡುಗಿಯನ್ನು ಏನು ಮಾಡಬೇಕೆಂಬುದು ನಿನ್ನ ಉದ್ದೇಶ?" ಎಂದು ಪಾದರಸ ಅಲಿಯನ್ನು ಕೇಳಿದನು.

"ಮದುವೆ ಮಾಡಿಕೊಂಡುಬಿಡ್ತೇನೆ!" ಎಂದ ಪಾದರಸ. "ಇಷ್ಟು ಮಾಡಿದವಳನ್ನೋ?" ಎಂದು ಹಸನ್ ಆಶ್ಚರ್ಯದಿಂದ ಕೇಳಿದನು.

"ಇನ್ನೂ ಇಷ್ಟು ಮಾಡಿದರೂ ಆ ಹುಡುಗಿಯನ್ನು ಕ್ಷಮಿಸಿಯೇನು. ಅವಳು ನನ್ನ ಹೆಂಡತಿಯಾದರೆ ನನಗೆ ಜೀವಿತದಲ್ಲಿ ಬೇರೆ ಯಾವ ಆಸೆಯೂ ಬಾರದು! ಹೇಗಾದರೂ ಅವಳನ್ನು ಮದುವೆಯಾಗಲೇಬೇಕು." ಎಂದು ಪಾದರಸ ಅಲೀ ಮನಃಪೂರ್ವಕವಾಗಿಯೇ ಹೇಳಿದನು.

"ಓಹೋ! ಸರಿ ಸರಿ! ಇಷ್ಟೊಂದು ಗಾಢವಾದ ಆಶೆ ನಿನಗಿದ್ದರೆ ಅದು ತೀರಲೇಬೇಕು. ನೀನು ಕೂಡಾ ಅವಳಿಗೆ ತಕ್ಕ ಒಳ್ಳೇ ಗಡಸುಗಾರ ಸುಂದರ ಪುರುಷನೇ. ನಿನಗೆ ಅವಳ ಜೋಡಿ ಸರಿಯಾಗೇ ಇದೆ" ಎಂದನು ಹಸನ್.



"ನಮ್ಮವನಿಗೆ ಸ್ವಲ್ಪ ಸಹಾಯ ಮಾಡಯ್ಯಾ ಹಸನ್" ಎಂದನು ಅಹ್ಮದ್. ಹಸನ್ ಸ್ವಲ್ಪ ಆಲೋಚಿಸಿ, ತಲೆಯೊಲಿದು ಒಂದು ಪಥಕವನ್ನು ಅಲೀಗೆ ತಿಳಿಸಿದನು.

ಅದರಂತೆ ಪಾದರಸ ಅಲೀ ತನ್ನ ಶರೀರಕ್ಕೆಲ್ಲಾ ಕರೀರಂಗು ಪೂಸಿಕೊಂಡು ನೀಗ್ರೋರವನ ಹಾಗೆ ಅಂಗವಸ್ತ್ರ ಸುತ್ತಿಕೊಂಡನು. ಕೈಯಲ್ಲಿ ಸ್ವಲ್ಪ ಹಣವನ್ನೂ, ಒಂದಿಷ್ಟು ಭಂಗಿಯನ್ನೂ ತೆಗೆದುಕೊಂಡು ತರಕಾರಿ ಮಾರುವ ಅಂಗಡಿ ಬೀದಿಗೆ ಹೋದನು. ಅಲ್ಲಿ ಅವನು ದಿಲ್ಲೈಲಾಳ ಅಡಿಗೇಯವನನ್ನು ಹುಡುಕಿ ಕಂಡು ಹಿಡಿದು, "ಅಣ್ಣಾ, ನಾನು ಈ ನಗರಕ್ಕೆ ಹೊಸತಾಗಿ ಬಂದವನು. ನನ್ನ ಜಾತಿಯವನಾದ ನೀನು ಸಿಕ್ಕಿದ್ದು ಸಂತೋಷವಾಯಿತು. ಬಾ, ಸ್ವಲ್ಪ ಸಾರಾಯಿ ಕುಡಿದು ಸಂತೋಷವಾಗಿರುವ." ಎಂದನು ನಗುತ್ತಾ.

ದಿಲ್ಲೈಲಾಳ ನೀಗ್ರೋ ಅಡಿಗೆಯವನು, "ನನಗೆ ಸ್ವಲ್ಪವೂ ಸಮಯವಿಲ್ಲ. ನಮ್ಮ ಮನೆಗೇ ಬಾ, ಅಲ್ಲಿ ನಿನಗೆ ಬೇಕಾದ ಎಲ್ಲಾ ಬಗೆಯ ಪಾನಗಳು, ತಿಂಡಿಗಳು ಎಲ್ಲವನ್ನೂ ನಾನು ಕೊಡುತ್ತೇನೆ. ನಮ್ಮ ಯಜಮಾನತಿ ಅದಕ್ಕೆಲ್ಲಾ ಏನೂ ಹೇಳುವುದಿಲ್ಲ" ಎಂದನು. ಪಾಧರಸನಿಗೆ ಬೇಕಾದುದೂ ಅದೇ ಆಗಿತ್ತು. ಅವನು ಆ ನೀಗ್ರೋನ ಹಿಂದೆ ದಿಲ್ಲೈಲಾಳ ಮನೆಗೆ ಹೋದನು. ಅಡಿಗೇ ಮನೆಯೊಳಗೆ ಹೊಕ್ಕನು, ಇಷ್ಟರಲ್ಲಿ ದಿಲ್ಲೈಲಾ ಜೇನಾಬರು ಭೋಜನಕ್ಕೆ ಬಂದರು. ಅಡಿಗೆಯವನು ಅವರ ಭೋಜನವನ್ನೂ ಪಾನೀಯಗಳನ್ನೂ ಒಯ್ದು ಒಯ್ದು ಅವರ ಮುಂದೆ ಇಡತೊಡಗಿದನು. ಅವನು ಆಚೆಗೆ ಹೋದಾಗ ಪಾದರಸನು ಪಾನೀಯಗಳಲ್ಲಿ ಭಂಗಿಯನ್ನು ಬೆರೆಸಿದನು.

ಸ್ವಲ್ಪ ಹೊತ್ತಿಗೆ ಪಾದರಸ ಅಲೀಯ ಪ್ರಯತ್ನ ಫಲ ಕೊಟ್ಟಿತು. ದಿಲ್ಲೈಲಾಳೂ, ಜೇನಾಬಳೂ, ನಲವತ್ತು ಮಂದಿ ನೀಗ್ರೋ ಗುಲಾಮರೂ ಕಡೆಗೆ ನೀಗ್ರೋ ಅಡಿಗೆಯವನೂ ಸಹಾ, ಹೊರಗಿರುವ ಬೇಟೆನಾಯಿಗಳು ಕೂಡಾ ಭಂಗಿಯ ಪ್ರಭಾವದಿಂದ ಇದ್ದಲ್ಲೇ ಪ್ರಜ್ಞೆಯಿಲ್ಲದೆ ಒರಗಿಹೋದರು.

ಪಾದರಸ ಅಲೀ ಯಥೇಚ್ಛವಾಗಿ ಮನೆಯೊಳಗೆ ಎಲ್ಲಾ ತಿರುಗಿದನು. ದಿಲ್ಲೈಲಾಳ ಅಧಿಕಾರದ ದುಸ್ತುಗಳನ್ನೂ, ಬಂಗಾರದ ಟೋಪಿಯನ್ನೂ ನೀಗ್ರೋರ ಕೆಂಪು ಜರಿಯ ದುಸ್ತುಗಳನ್ನೂ ಅಪಹರಿಸಿ ಎಲ್ಲ ಒಟ್ಟಿಗೆ ಒಂದು ಗಂಟು ಕಟ್ಟಿಕೊಂಡನು. "ಈ ಕೆಲಸ ಮಾಡಿದವನು ವೀರಾಧಿವೀರ ಪಾದರಸ ಅಲೀಯ ಹೊರತು ಮತ್ತೊಬ್ಬನಲ್ಲ" ಎಂದು ಒಂದು ಚೀಟೀ ಬರೆದಿಟ್ಟು, ಪಾರಿವಾಳಗಳನ್ನೂ, ಮೂಟೆಯನ್ನೂ ತೆಗೆದುಕೊಂಡು ನೆಟ್ಟಗೆ ಅಹ್ಮದನ ಬಳಿಗೆ ಹೋದನು.

ದಿಲ್ಲೈಲಾಳಿಗೆ ಪ್ರಜ್ಞೆ ಬಂದು ಎಚ್ಚರವಾದಾಗ ಕತ್ತಲೆಯಾಗುತ್ತಾ ಇತ್ತು. ಅವಳು ಪಾದರಸ ಅಲೀ ಬರೆದಿಟ್ಟ ಚೀಟಿ ಓದಿ ನೋಡಿ ಗಾಬರಿಯಾದಳು.

ಮನೆಯೊಳಗೆಲ್ಲಾ ಅಲೆದು ನೋಡಿದಳು. ಅವನು ಖಲೀಫರಿಗೆ ಸಂಬಂಧಿಸಿದ ಸರಕಾರಿ ಸೊತ್ತು ಮಾತ್ರ ಸಂಗ್ರಹಿಸಿಕೊಂಡು ಒಯ್ದಿದ್ದಾನೆಂದು ತಿಳಿದುಕೊಂಡಳು. ದಿಲ್ಲೈಲಾ ದೀರ್ಘವಾಗಿ ಆಲೋಚನೆ ಮಾಡಿದಳು. ಈ ಸಮಾಚಾರ ಹೊರಗೆ ಹರಡಿಬಿಟ್ಟರೆ ತನ್ನ ಗೌರವಕ್ಕೂ ಉದ್ಯೋಗಕ್ಕೂ ಭಂಗ ಬರುತ್ತದೆಂದು ನೊಂದಳು. ಪಾದರಸ ಅಲೀಯ ಮೇಲೆ ಹಗೆ ಸಾಧಿಸಿಕೊಂಡರೂ ಪ್ರಯೋಜನವಿಲ್ಲವೆನಿಸಿತು. ಅವನಿಂದ ಅಹ್ಮದನೇ ಈ ಕೆಲಸ ಮಾಡಿಸಿರಬೇಕು. ಅವನ ಕಾಲಿಗಾದರೂ ಬಿದ್ದು ಹೋದ ಸೊತ್ತುಗಳನ್ನು ತರುವುದರ ಹೊರತು ಬೇರೆ ದಾರಿ ಕಾಣಲಿಲ್ಲ. ಅಹ್ಮದನ ಮೇಲೆ ಹಗೆ ತೀರಿಸಿಕೊಳ್ಳಲು ತಾನು, ತನ್ನ ಮಗಳ ಮೂಲಕ ಪಾದರಸ ಅಲೀಗೆ ಸೋಲನ್ನುಂಟುಮಾಡಿದರೆ, ಅದಕ್ಕೆ ಪ್ರತಿಕ್ರಿಯೆಯಾಗಿ ಅಹ್ಮದ್ ಆ ಪಾದರಸನ ಮೂಲಕವೇ ತನ್ನ ಮೇಲೆ ಹಗೆ ತೀರಿಸಿಕೊಂಡಿದ್ದಾನೆ. ಎರಡೂ ಸರಿಹೋಯಿತು. ಆದುದರಿಂದ ಇನ್ನು ತನ್ನ ದೊಡ್ಡಸ್ತಿಕೆ ಬಿಟ್ಟು ಮಾತಾಡಿದರೆ ಅಹ್ಮದ್ ತನ್ನೊಂದಿಗೆ ರಾಜೀ ಮಾಡಿಕೊಳ್ಳಬಹುದು.

ಹೀಗೆ ನೆನೆದು ದಿಲ್ಲೈಲಾ, "ಈಗ ಬರುತ್ತೇನೆ" ಎಂದು ಮಗಳ ಹತ್ತಿರ ಹೇಳಿ, ಅಹ್ಮದನ ಮನೆಗೆ ಹೋದಳು.

ಅವಳು ಅಲ್ಲಿಗೆ ಹೋಗಿ ಮುಟ್ಟಿದಾಗ, ಅಹ್ಮದ್. ಹಸನ್ ಮತ್ತು ಪಾದರಸ ಅಲೀ ಕೂಡಾ ಕುಳಿತುಕೊಂಡು ಭೋಜನ ಮಾಡುತ್ತಾ ಇದ್ದರು. ದಿಲ್ಲೈಲಾಳನ್ನು ನೋಡಿದ ಕೂಡಲೇ ಅಹ್ಮದ್ ಮತ್ತು ಹಸನ್ ಎದ್ದು ತಲೆಬಾಗಿ ಸಲಾಂ ಸೂಚಿಸಿ, "ದಯಮಾಡಬೇಕು ದಿಲ್ಲೈಲಾ! ಹೀಗೆ ಬಂದು ನಮ್ಮ ಪಂಕ್ತೀಲಿ ಕೂತುಕೊಳ್ಳಿ!" ಎಂದು ಗೌರವದಿಂದ ಆಹ್ವಾನಿಸಿದರು.

ಅವರು ತಿನ್ನುತ್ತಿರುವುದು ಪಾರಿವಾಳಗಳ ಮಾಂಸವೆಂದು ಗೊತ್ತಾದ ಕೂಡಲೇ ದಿಲ್ಲೈಲಾಳಿಗೆ ಕಣ್ಣು ಕತ್ತಲೆ ಬಂದಿತು. ಅವಳು ನಡುಗುವ ಕಂಠದಿಂದ, "ಅಹ್ಮದನಿಗೆ ನನ್ನ ಮೇಲೆ ಎಷ್ಟೇ ಹಗೆ ಇದ್ದರೂ





ಖಲೀಫಾ ಅವರು ಪ್ರಾಣಪ್ರದವಾಗಿನೋಡಿಕೊಳ್ಳುವ ಅಂಚೆಯ ಪಾರಿವಾಳಗಳನ್ನು ಕಳ್ಳತನದಿಂದ ತರಿಸಿ ಅಡಿಗೇ ಮಾಡಿ ತಿನ್ನುವುದುಂಟೆ? ಎಂಥಾ ಕೆಲಸ ಇದು? ಕಳ್ಳತನಕ್ಕಾದರೂ ಒಂದು ನೀತಿ ಬೇಡವೋ?" ಎಂದು ಕೇಳಿದಳು.

ಹಸನ್ ದಿಲ್ಲೈಲಾಳನ್ನು ಸಮಾಧಾನ ಪಡಿಸುತ್ತ, "ನೀವೇನೂ ಗಾಬರಿ ಬೀಳಬೇಕಾಗಿಲ್ಲವಮ್ಮಾ! ಅಂಚೆಯ ಪಾರಿವಾಳಗಳು ಭದ್ರವಾಗಿವೆ, ಖಲೀಫರ ಸೊತ್ತುಗಳೆಲ್ಲಾ ಭದ್ರವಾಗಿವೆ. ನಮ್ಮದೊಂದು ಸಣ್ಣ ಕೋರಿಕೆ. ಈ ಹುಡುಗನ ಆಶೆ ಪಾಪ! ನೀವು ದಯಮಾಡಬೇಕು. ನಿಮ್ಮ ಪಾರಿವಾಳಗಳೂ, ದುಸ್ತುಗಳೂ ಈ ಕ್ಷಣವೇ ನಿಮಗೆ ಸಿಗುತ್ತವೆ." ಎಂದನು.

"ಅದೇನು ಆಶೆಯೋ ಹೇಳಿಬಿಡಿರಪ್ಪ. ನಾನು ಅಸಹಾಯದವಳೆಂದು ನಿಮಗೇನೂ ಗೊತ್ತಿಲ್ಲದ್ದಲ್ಲ" ಎಂದಳು ದಿಲ್ಲೈಲಾ.

"ಮತ್ತೇನೂ ಅಲ್ಲ. ಈ ಹುಡುಗ ಪಾದರಸ ಅಲೀ ನಿಮ್ಮ ಮಗಳು ಜೀನಾಬಳನ್ನು ಮದುವೆಯಾಗಬೇಕು ಅನ್ನುತ್ತಾನೆ" ಎಂದನು ಹಸನ್.

"ಅಯ್ಯೋ ಅಪ್ಪಗಳಿರಾ! ಇದಕ್ಕಾಗಿಯೋ ನನ್ನನ್ನು ಇಷ್ಟೆಲ್ಲಾ ಬಾಧಿಸಿದಿರಿ? ನಾನು ಒಪ್ಪಿಕೊಂಡು ಏನು ಲಾಭ? ನನ್ನ ಜೀನಾಬ್ ಒಪ್ಪಿಕೊಂಡರೂ ಲಾಭವಿಲ್ಲ. ಏಕೆಂದರೆ ಅವಳಿಗೆ ವಯಸ್ಸು ಬಂದು ಮದುವೆಯಾಗುವ ವರೆಗೂ ರಕ್ಷಕನಾಗಿರುವವನು ಅವಳ ಸೋದರ ಮಾವ. ಅಂದರೆ ನನ್ನ ದೊಡ್ಡಣ್ಣ ಜುರೇಕ್. ಅವನು ಸರಿ ಎಂದ ಹೊರತು ಈ ಮಮವೆಯಾಗುವಂತಿಲ್ಲ. ಇದು ನಿಮಗೆ ಗೊತ್ತಿಲ್ಲದ ವಿಷಯವೇನೂ ಅಲ್ಲವಷ್ಟೆ? ಜುರೇಕ್ ಅಣ್ಣ ಮಹಾ ಕಾರ್ಕೋಟಕ! ಅವನನ್ನು ಒಪ್ಪಿಸುವ ಭಾರ ಮಾತ್ರ ಪಾದರಸ ಅಲೀಗೇ ಸೇರಿದೆ. ನಮ್ಮದು ಏನೂ ಇಲ್ಲ" ಎಂದಳು ದಿಲ್ಲೈಲಾ.

"ಸರಿಯಮ್ಮ, ಜುರೇಕರನ್ನು ನೋಡಿ, ಅವರ ಅನುಮತಿ ಸಂಪಾದಿಸಿ ಆಮೇಲೆಯೇ ಜೀನಾಬಳನ್ನು ಮದುವೆಯಾಗುವೆನು" ಎಂದು ಹೇಳಿ ಪಾದರಸ ಅಲೀ ಹೊಸ ಉತ್ಸಾಹದಿಂದ ಎದ್ದನು.

ದಿಲ್ಲೈಲಾ ತನ್ನ ದುಸ್ತುಗಳನ್ನೂ, ಪಾರಿವಾಳಗಳನ್ನೂ ತೆಗೆದುಕೊಂಡು ಹೊರಟು ಹೋದಳು.

ದಿಲ್ಲೈಲಾಳ ಅಣ್ಣ ಜುರೇಕನು ಒಂದು ಕಾಲದಲ್ಲಿ ದೊಡ್ಡ ಕಳ್ಳನಾಗಿದ್ದವನು. ಆ ಕಾಲದಲ್ಲಿ ಅವನು ಮಾಡಿದ ಕಳ್ಳತನಗಳಿಗೆ ಲೆಕ್ಕವೇ ಇಲ್ಲ. ಒಂದು ಸಾರಿ ಕೂಡಾ ಸಿಕ್ಕಿಬಿದ್ದವನಲ್ಲ. ಅವನು ಕುಳಿತ ಸ್ಥಳದಲ್ಲಿದ್ದೇ ಎಲ್ಲಿ ಯಾವಾಗ ಬೇಕಾದರೂ ಕಳ್ಳತನ ಮಾಡಿಬಿಡುವ ಮಾಯಾ ಮೋಡಿಕಳ್ಳನವನು. ಈಗ ವೃದ್ಧಾಪ್ಯವು ಬಂದುದರಿಂದ ಕಳ್ಳತನವನ್ನು ಬಿಟ್ಟು ಮೀನುಗಳನ್ನು ಬಾಡಿಸಿಯೂ, ಬೇಯಿಸಿಯೂ ಪಕ್ವಪಡಿಸಿ ಮಾರಿ ಅದರಿಂದ ಜೀವಿಸಿಕೊಂಡಿದ್ದನು.

ಕಳವಿನ ಸೊತ್ತು ಬೇಕಾದಷ್ಟಿದ್ದರೂ, ಹೊರಗಿನಿಂದ ಸಂಭಾವಿತನಾಗಿರಲು ಈ ಬೇಸಿ ಮೀನುಗಳ ವ್ಯಾಪಾರ. ಹೀಗಾದರೂ ಆ ಮನುಷ್ಯನಲ್ಲಿ ಈಗಲೂ ಎಷ್ಟೋ ಶಕ್ತಿಗಳು ಇದ್ದುವು.

ಜುರೇಕ ತನ್ನ ಅಂಗಡಿಗೆ ಜನರನ್ನು ಆಕರ್ಷಿಸಲು ಒಂದು ಯುಕ್ತಿ ಮಾಡಿದ್ದನು. ಅಂಗಡಿಯ ಬಾಗಿಲಿನಲ್ಲಿ ಒಂದು ಸಾವಿರ ದೀನಾರಗಳ ಚೀಲವನ್ನು ನೇತಾಡಿ ಸಿಟ್ಟಿದ್ದನು. ಅದನ್ನು ತನಗೆ ತಿಳಿಯದಂತೆ ಯಾರು ಬೇಕಾದರೂ ಅಪಹರಿಸಬಹುದೆಂದು ಊರೊಳಗೆಲ್ಲ ಡಂಗುರ ಹೊಡೆಸಿದ್ದನು.

ಹೇಗಾದರೂ ಅದನ್ನು ಕದ್ದು ಬಿಡೋಣ ವೆಂದು ಸಾವಿರಾರು ಜನರು ಅಂಗಡಿಗೆ ಬಂದು ವ್ಯಾಪಾರ ಮಾಡುತ್ತಿದ್ದರು. ಆಧರೆ ಆ ದೀನಾರಗಳ ಚೀಲವನ್ನು ಕದಿಯಲು ಯಾರಿಗೂ ಸಾಧ್ಯವಾಗಿರ ಲಿಲ್ಲ. ಕಾರಣವೇನೆಂದರೆ, ಆ ಚೀಲವನ್ನು ಯಾರಾದರೂ ಮುಟ್ಟಿದರೆ ಸಾಕು. ಅಂಗಡಿಯ ತುಂಬಾ ಕಟ್ಟಲ್ಪಟ್ಟ ಗಂಟೆಗಳೂ, ತಮಟೆಗಳೂ ಒಮ್ಮೆಲೇ ಬಾರಿಸಲ್ಪಡುತ್ತವೆ. ಅದನ್ನು ಕೇಳಿದ ಕೂಡಲೇ ಜುರೇಕ್ ಎಲ್ಲಿದ್ದರೂ ಓಡಿ ಬಂದು ಕಳ್ಳ ನನ್ನು ಹಿಡಿದು ಬಿಡುತ್ತಾನೆ. ಅಥವಾ ಓಡುವ ಕಳ್ಳರ ಮೇಲೆ ಸೀಸದ ಗುಂಡುಗಳನ್ನು ಎಸೆಯುತ್ತಾನೆ. ಅವುಗಳ ಪೆಟ್ಟಿಗೆ ಕೈ ಕಾಲು ಮುರಿದುಕೊಂಡವರೂ ಬಹಳ ಮಂದಿ ಇದ್ದಾರೆ. ಒಬ್ಬಿಬ್ಬರು ಸೀಸದ ಗುಂಡಿ ನಿಂದ ತಲೆಯೊಡೆದು ಸತ್ತಿದ್ದಾರಂತೆ!

ಪಾದರಸ ಅಲೀ ಜುರೇಕನನ್ನು ನೋಡಿದನು. ಅಲ್ಲಿನ ವಿದ್ಯಮಾನಗಳನ್ನು ಮಂದಟ್ಟು ಮಾಡಿ ಕೊಂಡನು. ಆಮೇಲೆ ಜುರೇಕನ ಹತ್ತಿರ ತಾನು ಇಂಥವನೆಂದು ಹೇಳಿ, ಕೋತ್ವಾಲ ಅಹ್ಮದ್‌ರ ಮನೆಯಲ್ಲಿ ತಂಗಿರುವೆನೆಂದೂ, ಜೇನಾಬಳನ್ನು ತಾನು ಮದುವೆ ಮಾಡಿಕೊಳ್ಳಲು ಬಯಸುವೆನೆಂದೂ, ಅದಕ್ಕೆ ಅನುಮತಿ ಕೊಡಬೇಕೆಂದೂ ಕೇಳಿಕೊಂಡನು. ಆದರೆ ಮುದುಕ ಜುರೇಕ್ ಜೇನಾಬಳನ್ನು ಪಾದರಸ ಅಲೀಗೆ ಕೊಡಲು ಒಪ್ಪಲಿಲ್ಲ. ಈ ಅಲೀ ಜೇನಾಬಳಿಗೆ ತಕ್ಕವರನಲ್ಲವೆಂದು ಅವನು ಅಂದುಕೊಂಡನು.

ಪಾದರಸ ಅಲೀಗೆ ಜುರೇಕನಿಟ್ಟ ದೀನಾರಗಳ ಚೀಲವನ್ನು ಅಪಹರಿಸಿ, ಆ ಮೂಲಕ ಅವನ ಅನುಮತಿ ಸಂಪಾದಿಸಬಹುದೆಂದು ತೋರಿತು. ಅದಕ್ಕಾಗಿ ಅವನು ಗರ್ಭಿಣಿ ಸ್ತ್ರೀಯ ಹಾಗೆ ವೇಷ ಧರಿಸಿಕೊಂಡು ಜುರೇಕನ ಅಂಗಡಿಗೆ ಹೋದನು. ಮೀನು ವ್ಯಾಪಾರದಲ್ಲಿ ಚೌಕಾಸಿ ಮಾಡುತ್ತಿರುವಾಗ, ಪ್ರಸವವೇದನೆ ಪ್ರಾರಂಭವಾದಂತೆ ನಟಿಸಿದನು. ಅದನ್ನು ನೋಡಿ ಜುರೇಕ್ ಗಾಬರಿಯಾಗಿ ತನ್ನ ಹೆಂಡತಿಯನ್ನು ಕರೆಯಲು ಒಳಗೆ ಹೋದನು. (ಇನ್ನೂ ಇದೆ)






## ೮

**ಜು**ರೇಕನು ತನ್ನ ಹೆಂಡತಿಯನ್ನು ಕರೆಯಲು ಒಳಗೆ ಹೋದ ಕೂಡಲೇ ಪಾದರಸನು ತಟಕ್ಕನೆ ಹಾರಿ ದೀನಾರಗಳ ಚೀಲದ ಮೇಲೆ ಕೈ ಹಾಕಿದನು. ಮರು ಕ್ಷಣದಲ್ಲಿ ಅಂಗಡಿಯ ನಾಲ್ಕು ಮೂಲೆಗಳಿಂದಲೂ ತಮಟೆಗಳೂ ಗಂಟೆಗಳೂ ಮೊಳಗಿದುವು.

ಜುರೇಕ್ ಅರ್ಧದಲ್ಲೇ ಹಿಂದೆ ಓಡಿ ಬಂದು, ಚೀಲವನ್ನು ಬಿಟ್ಟು ಹಾಕಿ ಓಡಿಹೋಗುವ ಪಾದರಸ ನನ್ನು ಕಂಡು ಸೀಸದ ಗುಂಡನ್ನು ವೇಗವಾಗಿ ಬೀಸಿ ಒಗೆದನು. ಗರ್ಭಿಣಿ ವೇಷದ ಪಾದರಸನ ಸೊಂಟಕ್ಕೆ ಆ ಏಟು ತಗಲಿತು. ಅವನು ಓಡಲಾಗದೆ ಬವಳಿ ಬಂದು ಬೀದಿಯಲ್ಲಿ ಬಿದ್ದನು. ಆ ಮೇಲೆ ಎದ್ದು ಕುಂಟುತ್ತ ಅಹ್ಮದನ ಮನೆಗೆ ಸೇರಿದನು.

ಇದನ್ನೆಲ್ಲಾ ನೋಡಿದವರು ಜುರೇಕನನ್ನು ಬಗೆ ಬಗೆಯಾಗಿ ಬೈದುಕೊಂಡರು. "ಛೀಛಿ! ಏನು ಮನುಷ್ಯ ನೀನು? ನಿನ್ನ ಪಾಪದ ಹಣದಿಂದ ಎಲ್ಲರಿಗೂ ಆಶೆ ತೋರಿಸುವುದು ಸಾಲದೆ, ತುಂಬಿದ ಬಸಿರಿಯನ್ನು ಸೀಸದ ಗುಂಡಿನಿಂದ ಹೊಡೆಯುವದೆಂದರೇನು ? ನೀನು ಮನುಷ್ಯನೋ ಪಶುವೋ ? " ಎಂದರು.

" ನಿಮ್ಮ ವೇದಾಂತಗಳೆಲ್ಲಾ ನನಗೆ ಬೇಡ" ಎಂದು ಜುರೇಕ್ ನಿರ್ಲಕ್ಷ್ಯವಾಗಿ ಹೇಳಿದನು.

ಸೊಂಟಕ್ಕೆ ತಾಗಿದ ಪೆಟ್ಟು ಸ್ವಲ್ಪಮಟ್ಟಿಗೆ ಗುಣ ವಾದ ಕೂಡಲೇ ಪಾದರಸ ಅಲೀ ಮತ್ತೆ ಜುರೇಕನ ಅಂಗಡಿಗೆ ಹೊರಟನು. ಅವನು ಜುರೇಕನ ಕೈಯಲ್ಲಿ ಸಾಯಲಿಕ್ಕಾದರೂ ಸಿದ್ಧನಿದ್ದಾನೆಯೇ ಹೊರತು ಜೀನಾಬಳನ್ನು ಮದುವೆಯಾಗುವ ಯತ್ನವನ್ನು ಬಿಡಲು ಸಿದ್ಧನಿರಲಿಲ್ಲ.

ಈಸಾರಿ ಪಾದರಸನು ಒಬ್ಬ ನೌಕರನ ಹಾಗೆ ವೇಷ ಹಾಕಿಕೊಂಡು, ಕೈಯಲ್ಲೊಂದು ಚೀಲದೊಂದಿಗೆ ಜುರೇಕನ ಅಂಗಡಿಗೆ ಹೋಗಿ, " ಬಿಸಿಬಿಸಿಯಾದ ಹುರಿದ ಮೀನು ಇಪ್ಪತ್ತು ಬೇಕು. ಕೊಡಿರಿ" ಎಂದನು.

" ಬಿಸಿ ಬಿಸೀ ಬೇಕಾದರೆ ಬೆಂಕಿಮಾಡುವವರೆಗೆ ಸ್ವಲ್ಪ ನಿಲ್ಲು " ಎಂದು ಹೇಳಿ ಜುರೇಕ್ ಅಲ್ಲಿಂದೆದ್ದು ಒಳಕ್ಕೆ ಹೋದನು. ಕೂಡಲೇ ಪಾದರಸನು ಹಣದ ಚೀಲವನ್ನು ಹಾರಿ ಹಿಡಿದನು. ಉತ್ತರ ಕ್ಷಣದಲ್ಲೇ ಗಣಗಣ, ಡಮಡಮವೆಂದು ಗಂಟೇ ತಮಟೆಗಳು ಮೊಳಗಿದುವು. ಜುರೇಕ್ ಒಂದೇ ಹಾರಿಕೆಗೆ ಅಂಗಡಿಗೆ



ಬಂದು, "ನಿನ್ನ ವೇಷ ನನಗೆ ಗೊತ್ತಾಗಿಲ್ಲವೆಂದು ಕೊಂಡೆಯಾ?" ಎಂದು ಸೀಸದ ಗುಂಡನ್ನು ಪಾದರಸನ ತಲೆಗೆ ಗುರಿಯಿಟ್ಟು ಬಲವಾಗಿ ಬೀಸಿದನು. ಪಾದರಸನು ಥಕ್ಕನೆ ಬಗ್ಗಿದ್ದರಿಂದ, ಸೀಸದ ಗುಂಡು ನೇರಾಗಿ ಬೀದಿಗೆ ಹೋಗಿ, ಒಬ್ಬ ನೌಕರನು ಒಯ್ಯುತ್ತಿದ್ದ ಮೊಸರಿನ ಮಡಿಕೆಗೆ ತಗಲಿತು. ಮೊಸರೆಲ್ಲಾ ಚೆಲ್ಲಿ, ಆ ಸೇವಕನ ಹಿಂದೆಯೇ ಬರುತ್ತಿದ್ದ ಕಾದೀಯೊಬ್ಬರ ಮುಖದ ಗಡ್ಡದಲ್ಲಿಯೂ ಮುಖದಲ್ಲಿಯೂ ಅಷ್ಟುಷ್ಟು ಬಿದ್ದಿತು.

ಆದನ್ನು ನೋಡಿ ಸಮೀಪ ಇದ್ದವರು ಜುರೇಕ ನೊಂದಿಗೆ, "ಕಾದೀಯವರು ನಿನ್ನ ಪಾಪದ ಹಣದ ಮೂಟೆಗೆ ಎರಡುಪಾಲು ಬಡ್ಡೀ ಲೆಕ್ಕ ಹಾಕಿ ಕಿತ್ತುಕೊಳ್ಳ ದಿದ್ದರೆ ನೋಡಿಕೋ!" ಎಂದರು. "ನೋಡಿಕೊಳ್ಳು ತ್ತೇನೆ, ಹೋಗಿರಾಚೆ!" ಎಂದ ಅಲಕ್ಷ್ಯದಿಂದ ಜುರೇಕ.

ಎರಡು ಪ್ರಯತ್ನಗಳು ವಿಫಲವಾದರೂ ಪಾದರಸನು ಆಶೆಯನ್ನು ಬಿಟ್ಟುಬಿಡಲಿಲ್ಲ. ಅವನು ಮೂರನೇಸಾರಿ ಹಾವುಗಾರನ ವೇಷ ಹಾಕಿಕೊಂಡು, ಬುಟ್ಟಿಯೊಳಗೆ ಮೂರು ನಾಗರಹಾವುಗಳನ್ನು ಇಟ್ಟು, ಜುರೇಕನ ಅಂಗಡಿಯ ಮುಂದೆ ಅವುಗಳನ್ನು ಆಡಿಸ ತೊಡಗಿದನು. ಆಡಿಸುತ್ತಿದ್ದಂತೆ ಪಾದರಸನು ಒಂದು ದೊಡ್ಡ ಹಾವನ್ನು ಅಂಗಡಿಯಲ್ಲಿರುವ ಜುರೇಕನ ಕಾಲುಗಳ ಮುಂದೆ ಬೀಳುವ ಹಾಗೆ ಬೀಸಿ ಒಗೆದನು. ಜುರೇಕ್ ಹೆದರಿ ಹಾರಿ ಎದ್ದು ಆಚೆಗೆ ಓಡಿದನು. ಆ ಗಡಿಬಿಡಿಯಲ್ಲಿ ಪಾದರಸನು ಥಟ್ಟನೆ ಅಂಗಡಿಗೆ ಹಾರಿ ಹಣದ ಚೀಲವನ್ನು ಹಿಡಿದನು. ಆದರೆ ಮರು ಕ್ಷಣದಲ್ಲೇ ಜುರೇಕನು ತಿರುಗಿ ಬಂದು ಸೀಸದ ಗುಂಡಿನಿಂದ ಹಾವಿನ ತಲೆಯನ್ನು ಜಜ್ಜಿ, ಮತ್ತೊಂದು ಗುಂಡನ್ನು ಪಾದರಸನ ಮೇಲೆ ಬೀಸಿದನು. ಪಾದರಸನು ಪಕ್ಕಕ್ಕೆ ವಾಲಿ ತಪ್ಪಿಸಿಕೊಂಡುದರಿಂದ ಗುಂಡು ಬೀದಿಯಲ್ಲಿ ಹೋಗುವ ಮುದುಕಿಗೆ ಬಡಿದು, ಆ ಕ್ಷಣ ದಲ್ಲೇ ಅವಳನ್ನು ಪರಲೋಕಕ್ಕೆ ಕಳುಹಿಸಿತು.

ಸುತ್ತುಮುತ್ತಲಿದ್ದವರೆಲ್ಲಾ ಆ ಘೋರವನ್ನು ನೋಡಿ ಜುರೇಕನನ್ನು ಒದೆಯಲು ನೋಡಿದರು. ಅವರಿಗೆ ಹೆದರಿ ಜುರೇಕ್ ಹಣದ ಚೀಲವನ್ನು ಅಲ್ಲಿಂದ ತೆಗೆಯಲು ಒಪ್ಪಿದನು. ಹಾಗೆಯೇ ಅದನ್ನು ತೆಗೆದು ತನ್ನ ಮನೆಯ ಅಡಿಗೇ ಕೋಣೆಯಲ್ಲಿ ಹೊಂಡ ತೆಗೆದು ಅದರೊಳಗೆ ಚೀಲವನ್ನು ಹುಗಿದಿಟ್ಟನು.

"ಹೇಗೂ ದೀನಾರಗಳ ಚೀಲವನ್ನು ತೆಗೆದಿರಲ್ಲ? ಆ ಹಣವನ್ನು ಮಗನ ಹುಟ್ಟಿದ ಹಬ್ಬಕ್ಕೆ ಖರ್ಚು ಮಾಡೋಣ" ಎಂದಳು ಜುರೇಕನ ಹೆಂಡತಿ. ಜುರೇಕ ಅದಕ್ಕೆ ಒಪ್ಪಲಿಲ್ಲ. ಆ ದಿನ ರಾತ್ರಿ ಯಾವುದೋ ಒಂದು ಹಕ್ಕಿ ಅಡಿಗೇ ಕೋಣೆಯ ನೆಲವನ್ನು ಕೊಕ್ಕಿನಿಂದ ಅಗೆದು ಹಣದ ಚೀಲವನ್ನು ಎತ್ತಿಕೊಂಡ ಹಾಗೆ ಜುರೇಕನಿಗೆ ಸ್ವಪ್ನ ಕಟ್ಟಿತು. ಅವನು ಗಾಬರಿಯಿಂದ ಎದ್ದು ಹೆಂಡತಿಯೊಂದಿಗೆ, "ಎಲೆಲೇ! ಯಾವುದೋ ಹಕ್ಕಿ ಅಡಿಗೇ ಮನೆಯಲ್ಲಿ ತೋಡುತ್ತಾ ಇದೆ. ಹೋಗಿ ನೋಡು!" ಎಂದನು.




ಜುರೇಕನ ಹೆಂಡತಿ ದೀಪ ತೆಗೆದುಕೊಂಡು ಅಡಿಗೆ ಮನೆಗೆ ಹೋದಳು. ಅಲ್ಲಿ ಹಕ್ಕಿ ಪಿಕ್ಕಿ ಯಾವುದೂ ಇರಲಿಲ್ಲ. ಆದರೆ ಕಿಟಕಿಯಿಂದ ಯಾರೋ ಧುಮುಕಿ ಹೋದುದನ್ನು ಅವಳು ನೋಡಿದಳು. ಆ ವ್ಯಕ್ತಿಯ ಕೈಯಲ್ಲಿ ಹಣದ ಚೀಲವಿದ್ದಿತು.

ಅದನ್ನು ಕದ್ದುಕೊಂಡು ಹೋದವನು ಪಾದರಸ ಅಲೀಯೇ! ಅವನು ಅಲ್ಲಿಯೇ ಹೊಂಚಿಕೊಂಡಿದ್ದು, ಚೀಲವನ್ನು ಅಡಿಗೇ ಕೋಣೆಯಲ್ಲಿ ಹುಗಿದಿಡುವುದನ್ನು ಗಮನಿಸಿ, ರಾತ್ರಿ ಬಂದು ಅದನ್ನು ಹಾಗೆ ಎಬ್ಬಿಸಿಕೊಂಡು ಹೋಗಿದ್ದನು.

"ನಿಮ್ಮ ಬಾಯಿಗೆ ಮಣ್ಣು ಬೀಳ! ಹಣವನ್ನು ಮಗನ ಹುಟ್ಟಿದ ಹಬ್ಬಕ್ಕೆ ಖರ್ಚುಮಾಡೀ ಅಂದರೆ ಬೇಡಾಂತ ಹುಗಿದಿಟ್ಟಿರಿ. ಈಗ ಕಳ್ಳ ಎತ್ತಿಕೊಂಡು ಹೋದಾಯಿತು! ಇನ್ನೇನಿದೆ?" ಎಂದು ಜುರೇಕನ ಹೆಂಡತಿ ಗೋಳಾಡಿದಳು.

"ಅದೆಲ್ಲಿಗೆ ಹೋಗುತ್ತೆ? ಈಗಲೇ ತಾರದೆ ಬಿಡುತ್ತೇನೆಯೆ?" ಎಂದು ಜುರೇಕ ಅವಸರವಸರವಾಗಿ ಅಲ್ಲಿಂದ ಹೊರಗೆ ಓಡಿದನು.

"ಹಣದ ಚೀಲವಿಲ್ಲದೆ ಮನೆಗೆ ಬಂದರೆ ಸತ್ತರೂ ಬಾಗಿಲು ತೆರೆಯಲಾರೆ!" ಎಂದು ಚೀರಿದಳು ಹೆಂಡತಿ.

ಈ ಹಣದ ಚೀಲಕ್ಕಾಗಿ ಮೂರುಸಾರಿ ಪ್ರಯತ್ನಿಸಿದವನು ಯಾರೆಂದು ಜುರೇಕನಿಗೆ ಗೊತ್ತಿತ್ತು. ಪಾದರಸ ಅಲೀ ಎಂಬವನು ಕೊತ್ವಾಲ ಅಹ್ಮದನ ಮನೆಯಲ್ಲಿರುವುದೂ ಅವನಿಗೆ ಗೊತ್ತು. ಆದ್ದರಿಂದ ಅವನು ಅಡ್ಡದಾರಿ ಹಿಡಿದು, ಮುಂದಾಗಿ ಓಡುತ್ತಾ ಹೋಗಿ, ಅಹ್ಮದನ ಪಕ್ಕದ ಮನೆಯ ಮಾಳಿಗೆಗೆ ಹತ್ತಿ, ಹಾರಿ ಅಹ್ಮದನ ಮನೆಯೊಳಗೆ ಸೇರಿ, ಕೆಳಗಿಳಿದು, ಬಾಗಿಲು ಮುಚ್ಚಿ, ಅಲ್ಲಿಯೇ ಪಾದರಸನ ಬರುವಿಕೆಯನ್ನು ನಿರೀಕ್ಷಿಸಿ ನಿಂತನು.

ಅಷ್ಟರಲ್ಲಿ ಪಾದರಸ ಅಲೀ ಅಲ್ಲಿಗೆ ಬಂದು ಬಾಗಿಲು ತಟ್ಟಿದನು. ಜುರೇಕನು ಅಹ್ಮದನ ಕಂಠಸ್ವರ ಮಾಡಿಕೊಂಡು, "ಯಾರು ಪಾದರಸನೇನಾ? ಚೀಲ ತಂದೆಯಾ? ಎಲ್ಲಿದೆ? ಬಾಗಿಲಿನ ಅಡಿಯಿಂದ ಒಳಕ್ಕೆ ತಳ್ಳು. ಇಲ್ಲಿ ಭಲೇ ಗಮ್ಮತ್ತಿನ ಪಂಥ! ಮೊದಲು ಹಣದ ಚೀಲ ಕೊಡು. ಬಾಗಿಲು ತೆರೆದ ಮೇಲೆ ಎಲ್ಲಾ ಹೇಳುತ್ತೇನೆ" ಎಂದನು.

ಹೀಗೆ ಹೇಳಿದ್ದು ಅಹ್ಮದನೇ ಎಂದುಕೊಂಡು ಪಾದರಸನು, ಹಣದ ಚೀಲವನ್ನು ಬಾಗಿಲಿನ ಕೆಳಗಿನಿಂದ ಒಳಕ್ಕೆ ದೂಡಿದನು. ಜುರೇಕ ಅದನ್ನು ತೆಗೆದುಕೊಂಡು ಅಹ್ಮದನ ಮನೆಯೊಳಗಿನ ಮೆಟ್ಟಿಲನ್ನೇರಿ ಮಾಳಿಗೆಗೆ ಹೋಗಿ, ಆ ಮಾಳಿಗೆಯಿಂದ ಪಕ್ಕದ ಮಾಳಿಗೆಗೆ ಹಾರಿ ಆ ಮನೆಯ ಮೆಟ್ಟಿಲಲ್ಲಿ ಕೆಳಗಿಳಿದು, ಬಾಗಿಲು ತೆರೆದುಕೊಂಡು ಬೀದಿಗಿಳಿದು ಅತ್ಯಾನಂದದಿಂದ ತನ್ನ ಮನೆಗೆ ಹೋದನು.

ಇಲ್ಲಿ ಪಾದರಸನು ಒಂದೆರಡು ಸಾರಿ ಬಾಗಿಲು ತಟ್ಟಿ ನೋಡಿದನು. ಯಾವ ಶಬ್ದವೂ ಕೇಳದಿರಲು, ಜುರೇಕ ತನ್ನನ್ನು ಮೋಸಮಾಡಿದನೆಂದು ತಿಳಿದು

ಕೊಂಡನು. ಮರುನಿಮಿಷದಲ್ಲೇ ಅವನು ವೇಗವಾಗಿ ಒಳದಾರಿಯಲ್ಲಿ ಓಡಿ ಜುರೇಕನ ಮನೆಯೊಳಗೆ ಸೇರಿಕೊಂಡನು. ಮಾಳಿಗೆಯ ಮೇಲೆ ಮಲಗುವ ಕೋಣೆಯಲ್ಲಿ ಜುರೇಕನ ಹೆಂಡತಿ ಮಗುವನ್ನಿಟ್ಟು ಕೊಂಡು ನಿದ್ದೆ ಮಾಡುತ್ತಿದ್ದಳು, ನಿದ್ದೆಗಣ್ಣಿನಲ್ಲಿ "ಹಣದ ಚೀಲ ತಾರದೆ ಬಾಗಿಲು ತೆರೆಯಲಾರೆ" ಎಂದು ಗೊಣಗುತ್ತಿದ್ದಳು. ಪಾದರಸನು ಅವಳು ಎಚ್ಚರಾಗುವುದರೊಳಗೆ ಅವಳ ಕೈ ಕಾಲುಗಳನ್ನು ಕಟ್ಟಿ ಹಾಕಿದನು. ಬಾಯಿಗೆ ಬಟ್ಟೆ ತುರುಕಿ ಮಗನನ್ನು ಒಂದು ಬುಟ್ಟಿಯಲ್ಲಿ ಮಲಗಿಸಿ ಇನ್ನೊಂದು ಬುಟ್ಟಿಯನ್ನು ಹಗ್ಗದಲ್ಲಿ ಕೆಳಗಿಳಿಸಿ, ಜುರೇಕನ ಬರುವಿಕೆಯನ್ನು ಕಾದು ತಲೆಬಾಗಿಲ ಹಿಂದೆ ನಿಂತನು.

ಅಷ್ಟರಲ್ಲಿ ಪಾದರಸನು ಜುರೇಕನ ಹೆಂಡತಿಯ ಕಂಠದಲ್ಲಿ "ಹಣದ ಚೀಲ ಸಿಕ್ಕಿತೇ ?" ಎಂದು ಕೇಳಿದನು. "ತಂದಿದ್ದೇನೆ" ಎಂದನು ಜುರೇಕ.

"ಅಲ್ಲಿರುವ ಬುಟ್ಟಿಗೆ ಹಾಕು. ಹಣ ಲೆಕ್ಕ ಮಾಡಿ ನೋಡಿದ ಹೊರತು ಬಾಗಿಲು ತೆಗೆಯಲಾರೆ" ಎಂದು ಪಾದರಸನು ಜುರೇಕನ ಹೆಂಡತಿಯ ಸ್ವರದಲ್ಲೇ ಹೇಳಿ ಮಾಳಿಗೆಯ ಮೇಲೆ ಹೋದನು. ಅವನು ಚಿಕ್ಕದೊಂದು ಬುಟ್ಟಿಯನ್ನು ಹಗ್ಗ ಕಟ್ಟಿ ಈ ಮೊದಲೇ ಕೆಳಗಿಳಿಸಿಟ್ಟಿದ್ದನು. ಜುರೇಕ ಆ ಬುಟ್ಟಿಯಲ್ಲಿ ಹಣದ ಚೀಲವನ್ನಿಟ್ಟ ಕೂಡಲೇ ಪಾದರಸನು ಅದನ್ನು ಮೇಲಕ್ಕೆ ಎಳೆದುಕೊಂಡು ಚೀಲವನ್ನು ಎತ್ತಿ, ಮಗುವಿನ ಬುಟ್ಟಿಯೊಳಗೆ ಅದನ್ನಿಟ್ಟು ಹೊರ ಬಿದ್ದು ಅಹ್ಮದನ ಮನೆಗೆ ಹೋಗಿ ಬಿಟ್ಟನು.

ತನ್ನ ಹೆಂಡತಿ ಎಷ್ಟು ಹೊತ್ತಾದರೂ ಬಾಗಿಲು ತೆರೆಯದಿರುವುದನ್ನು ನೋಡಿ ಜುರೇಕ ಬಾಗಿಲು ಒಡೆಯುವ ಹಾಗೆ ಬಡಿಯತೊಡಗಿದನು. ಆ ಶಬ್ದಕ್ಕೆ ಸುತ್ತು ಮುತ್ತಿನವರೆಲ್ಲಾ ಅಲ್ಲಿಗೆ ಬಂದು ಸೇರಿದರು. ಎಲ್ಲರೂ ಸೇರಿ ಎಷ್ಟೇ ಕೂಗಾಡಿದರೂ ಬಾಗಿಲು ತೆರೆಯುವವರೇ ಇಲ್ಲ. ಕಡೆಗೆ ಎಲ್ಲರೂ ಸೇರಿ ಆ ಬಾಗಿಲನ್ನು ಎಬ್ಬಿಸಿ ಒಳಗೆ ಹೋದರು. ಜುರೇಕನ ಹೆಂಡತಿ ಬಾಯಿಗೆ ಬಟ್ಟೆ ತುರುಕಲ್ಪಟ್ಟು ಮಂಚಕ್ಕೆ ಸೇರಿಸಿ ಕಟ್ಟಲ್ಪಟ್ಟಿದ್ದಳು. ಹಣದ ಚೀಲವೂ ಇಲ್ಲ. ಅದರ ಮೇಲೆ ಮಗನ ಜಾಡೂ ಕಾಣಲಿಲ್ಲ.

ಜುರೇಕ ತನ್ನ ಹೆಂಡತಿಯ ಕಟ್ಟುಗಳನ್ನು ಬಿಚ್ಚಿ ನಡೆದ ಸಂಗತಿಯನ್ನೆಲ್ಲಾ ತಿಳಿದುಕೊಂಡು, ತಲೆ ಕೆರೆದುಕೊಳ್ಳುತ್ತ ಅಹ್ಮದನ ಮನೆಗೆ ಹೋಗಿ ದಡದಡನೆ ಬಾಗಿಲು ತಟ್ಟಿದನು. ಆಗ ತಾನೇ ಬೆಳಗಾಗುತ್ತಿತ್ತು. ಒಳಗೆ ಎಲ್ಲರೂ ಎಚ್ಚರದಲ್ಲೇ ಇದ್ದರು. ಜುರೇಕ ಪಾದರಸನನ್ನು ನೋಡಿದ ಕೂಡಲೇ, "ಹಣದ ಚೀಲವನ್ನು ಸಂಪಾದಿಸಿಬಿಟ್ಟೆಯಪ್ಪಾ. ನನ್ನ ಮಗನನ್ನು ಕೊಟ್ಟು ಬಿಡು" ಎಂದು ಬೇಡಿದನು.

(ಮುಂದಿನ ಸಂಚಿಕೆಯಲ್ಲಿ ಮುಗಿಯುತ್ತದೆ)





# ಇಬ್ಬರು ಮೋಸಗಾತಿಯರು

೯

ಜುರೇಕನ ಚಿಂತೆಯನ್ನು ನೋಡಿ ಹಸನ್ ಸಣ್ಣಗೆ ನಗುತ್ತ, "ಅವಸರಪಡಬೇಡಿ. ನಿಮಗೆ ನಿಮ್ಮ ಹಣದ ಚೀಲ ದೊರಕುತ್ತದೆ. ನಿಮ್ಮ ಹುಡುಗನೂ ದೊರಕುತ್ತಾನೆ. ನೀವು ದೊಡ್ಡ ಮನಸ್ಸುಮಾಡಿ, ನಮ್ಮ ಹುಡುಗ ಪಾದರಸ ಅಲೀಗೆ ನಿಮ್ಮ ಸೊಸೆ ಜೀನಾಬಳನ್ನು ಕೊಟ್ಟು ಮದುವೆಗೆ ಮುಹೂರ್ತ ಇಟ್ಟು, ಮತ್ತೆ ಹೋಗಿರಿ! ಒಪ್ಪುವಿರಾ?" ಎಂದನು.

"ನಮ್ಮ ಜೀನಾಬಳನ್ನು ನಿಮ್ಮ ಅಲೀಗೆ ಕೊಟ್ಟು ಮದುವೆಮಾಡಲು ನನಗೇನೂ ಅಭ್ಯಂತರವಿಲ್ಲ. ಆದರೆ ಜೀನಾಬಳನ್ನು ಸಂತೆಯಲ್ಲಿ ಕೊಂಡುಕೊಳ್ಳುವ ಹಾಗೆ ಕೊಂಡುಕೊಳ್ಳಲು ಅವಳು ಮೇಕೇ ಮರಿಯಲ್ಲ. ಅವಳನ್ನು ಮದುವೆಯಾಗುವವನು ಕನ್ಯಾಶುಲ್ಕದ ಭರಣ ಕೊಡಬೇಕಾಗುತ್ತದೆ," ಎಂದನು ಜುರೇಕ್.

"ಅಷ್ಟೇ ತಾನೇ ? ತಪ್ಪದೆ ಕೊಡುತ್ತೇನೆ. ಏನು ಕೊಡಬೇಕು ?" ಎಂದನು ಪಾದರಸ.

ಅಜರಯ್ಯನ ಮಗಳು ಕಮರಳ ಹತ್ತಿರವಿರುವ ಬಂಗಾರದ ದುಪಟಿ, ಬಂಗಾರದ ಶಿರಾಭರಣ, ಬಂಗಾರದ ಒಡ್ಯಾಣ, ಬಂಗಾರದ ಚಡಾವು ಇವಿಷ್ಟನ್ನು ತಂದುಕೊಡುವವನನ್ನು ಮದುವೆ ಮಾಡಿಕೊಳ್ಳ ಬೇಕೆಂಬುದು ಜೀನಾಬಳ ಅಭಿಪ್ರಾಯ. ಅವುಗಳನ್ನು ನೀನು ತಂದು ಕೊಟ್ಟೆಯಾದರೆ, ಮದುವೆಗೆ ನನ್ನ ಅಭ್ಯಂತರವಿಲ್ಲ" ಎಂದನು ಜುರೇಕ್.

"ಖಂಡಿತಾ ತರುತ್ತೇನೆ" ಎಂದನು ಪಾದರಸ ಅಲೀ.

ಆಮೇಲೆ ಜುರೇಕ್ ತನ್ನ ಮಗನನ್ನೂ, ಹಣದ ಚೀಲವನ್ನೂ ತೆಗೆದುಕೊಂಡು ಹೋದನು. ಆಗ ಹಸನ್ ಪಾದರಸನನ್ನು ನೋಡಿ, "ನಿನಗೇನಾದರೂ ಹುಚ್ಚು ಹಿಡಿಯಿತೇನು ? ಇಂತಹ ಕೆಲಸ ಏಕೆ ಮೈಮೇಲೆ ಹಾಕಿಕೊಂಡೆ ? ಅಜರಯ್ಯ ಯಾರೆಂದು ಕೊಂಡೆ ? ಮಂತ್ರಗಾರ, ಕೈಮಾಸು ವಿದ್ಯೆ ತಿಳಿದವನು. ಅವನೊಂದಿಗೆ ಭೂತಪಿಶಾಚಿಗಳೆಲ್ಲ ಮಾತಾಡುತ್ತವೆ. ಅವನು ಬಾಗ್ದಾದ್ ನಗರದ ಗೋಡೆಗಳ ಹೊರಗೆ ಬೆಳ್ಳಿ, ಬಂಗಾರದ ಇಟ್ಟಿಗೆಗಳಿಂದ ಕಟ್ಟಿದ ಭವನದಲ್ಲಿ ಇರುತ್ತಾನೆ. ರಾತ್ರಿಯ ಹೊತ್ತಿನಲ್ಲಿ ಅವನು ಮನೆಯಲ್ಲಿರುವಾಗ ಹೊರತು ಆ ಮನೆ ಯಾರಿಗೂ ಕಾಣಲಾರದು. ಹಗಲೆಲ್ಲಾ ಅವನು ನಗರದಲ್ಲಿ ಬಡ್ಡೀವ್ಯಾಪಾರ ಮಾಡಿಕೊಂಡಿರುತ್ತಾನೆ.

ರಾತ್ರಿಯಾಗುವಾಗ ಮನೆಗೆ ಹೋಗಿ ಕಟಕಿಯಲ್ಲಿ ನಿಂತುಕೊಂಡು ತನ್ನ ಮಗಳ ಬಂಗಾರದ, ದುಪಟಿ ಮೊದಲಾದುವನ್ನೆಲ್ಲ ಒಂದು ಬಂಗಾರದ ಹರಿವಾಣ ದಲ್ಲಿಟ್ಟು ನಿಂತುಕೊಂಡು, ಇರಾಕ್ ಇರಾನ್ ಅರೇಬಿಯಾ ದೇಶದಲ್ಲಿರುವ ಎಂಥಾ ಚೋರಶಿಖಾ ಮಣಿಯಾದರೂ ಸರಿಯೇ, ಇದನ್ನು ಕದ್ದುಕೊಳ್ಳಿರಿ, ನೋಡುತ್ತೇನೆ, ಎಂದು ಗಟ್ಟಿಯಾಗಿ ಹೇಳುವನು. ಎಷ್ಟೋಮಂದಿ ಕಳ್ಳರು ಅವುಗಳನ್ನು ಕದಿಯಲು ಪ್ರಯತ್ನಿಸಿ ನಾಶವಾಗಿ ಹೋದರು. ಅವರ ಹಾಗೆ ನಿನ್ನನ್ನು ಕೂಡಾ ನಾಶಮಾಡಬೇಕೆಂಬ ದುರುದ್ದೇಶ ದಿಂದಲೇ ಜುರೇಕ್ ನಿನ್ನನ್ನು ಕಳಿಸಿಟ್ಟಿದ್ದಾನೆ. ಈ ಕೆಲಸ ನಿನ್ನಿಂದಾಗುವುದಂತೂ ಇಲ್ಲ !" ಎಂದನು.

" ತರುತ್ತೇನೆಂದು ಹೇಳಿಯಾಯಿತು. ಜೀನಾಬ್ ಮದುಮಗಳಾಗುವಾಗ ಆ ಬಂಗಾರದ ದುಪ್ಪಟಿ ಹೊದ್ದು, ಬಂಗಾರದ ಶಿಖಾಭರಣದಿಂದ ಅಲಂಕೃತಳಾಗಿ, ಬಂಗಾರದ ಒಡ್ಯಾಣ ಕಟ್ಟಿಕೊಂಡು, ಬಂಗಾರದ ಚಡಾವು ಮೆಟ್ಟಿಕೊಂಡು ನನ್ನ ಮುಂದೆ ಬರಲೇಬೇಕು. ಏನು ಬೇಕಾದರೂ ಆಗಲಿ !" ಎಂದನು ಪಾದರಸ ಧೈರ್ಯದಿಂದ.

ಅವನನ್ನು ಯಾರೂ ತಡೆಯಲಾರದೆ ಹೋದರು. ಅವನು ಅತ್ಯುತ್ಸಾಹದಿಂದ ಆಗಲೇ ಹೊರಟು ಅಜರಯ್ಯನ ಅಂಗಡಿಗೆ ಹೋದನು. ಅಜರಯ್ಯ ಬಂಗಾರವನ್ನು ತೂಕಮಾಡಿ, ಚೀಲಗಳಲ್ಲಿ ತುಂಬಿಸಿ ಕತ್ತೆಗಳ ಮೇಲೆ ಹೇರಿಕೊಂಡಿದ್ದನು. ಅಜರಯ್ಯನು ಅಂಗಡಿಯನ್ನು ಮುಚ್ಚಿ ಕತ್ತೆಯ ಮೇಲೆ ಸವಾರಿ ಕುಳಿತು ಮನೆಗೆ ಹೊರಡುವ ವರೆಗೂ, ಅಲೀ ಪಾದರಸನು ದೂರದಲ್ಲಿ ಕಾದುಕೊಂಡಿದ್ದು, ಆಮೇಲೆ ಅವನ ಹಿಂದೆಯೇ ಹೊರಟನು.

ಅಜರಯ್ಯನು ಊರಹೊರಗಿನ ಒಂದು ಸ್ಥಳದಲ್ಲಿ ನಿಂತು, ತನ್ನ ಚೀಲದೊಳಗಿನಿಂದ ಒಂದು ಮುಷ್ಟಿ ಮರಳನ್ನು ತೆಗೆದು ಗೊಣಗೊಣನೆ ಮಂತ್ರೋಚ್ಚಾರ ಮಾಡಿ ಗಾಳಿಯಲ್ಲಿ ಚೆಲ್ಲಿದನು. ಕೂಡಲೇ ಅವನ ಇದಿರಿನಲ್ಲಿ ದೊಡ್ಡದೊಂದು ಭವನವು ಪ್ರತ್ಯಕ್ಷ ವಾಯಿತು. ಆ ಭವನವು ಬಂಗಾರದ ಮತ್ತು



ಬೆಳ್ಳಿಯ ಇಟ್ಟಿಗೆಗಳಿಂದ ಅದ್ಭುತ ಸುಂದರವಾಗಿ ಕಟ್ಟಲ್ಪಟ್ಟಿತ್ತು. ಅಜರಯ್ಯ ಕತ್ತಿಯ ಮೇಲೆ ಕುಳಿತುಕೊಂಡೇ ಭವನದ ಬಾಗಿಲಿನೊಳಗೆ ಪ್ರವೇಶ ಮಾಡಿದನು.

ಮತ್ತೆ ಸ್ವಲ್ಪ ಹೊತ್ತಿನ ಮೇಲೆ ಕಿಟಕಿಯನ್ನು ತೆರೆದು, ಬಂಗಾರದ ಹರಿವಾಣದಲ್ಲಿ ಬಂಗಾರದ ದುಪಟಿ ಮೊದಲಾದುವನ್ನಿಟ್ಟು ಕೈಯಲ್ಲಿ ಹಿಡಿದು ನಿಂತುಕೊಂಡು ಕಿಟಕಿಯ ಹೊರಗೆ ತೋರಿಸುತ್ತ, "ಇರಾಕ್ ಇರಾನ್ ಅರೇಬಿಯಾ ದೇಶಗಳಲ್ಲಿರುವ ಚೋರಶಿಖಾಮಣಿಗಳೇ ! ನಿಮ್ಮಿಂದಾದರೆ ನನ್ನ ಮಗಳ ಈ ಸೊತ್ತನ್ನು ಅಪಹರಿಸಿ ಅವಳನ್ನು ಮದುವೆಯಾಗಿರಿ" ಎಂದನು ಗಟ್ಟಿಯಾಗಿ.

ಅಲೀ ಆಲೋಚನೆ ಮಾಡಿದನು. ಅಜರಯ್ಯನ ಹತ್ತಿರ ಹೋಗಿ, ಒಳ್ಳೆಯ ಮಾತಿನಲ್ಲಿ ಕೇಳಿ ಆ ವಸ್ತುಗಳನ್ನು ಬಹುಮಾನವಾಗಿ ಪಡೆಯಬೇಕೆಂದು ನಿಶ್ಚಯಿಸಿಕೊಂಡನು. ಅಂತಲೇ ಅವನು ಭವನದ ಕೆಳಗೆ ಅಜರಯ್ಯನ ಮುಂದೆ ನಿಂತು, "ಅಯ್ಯಾ. ನಿಮ್ಮ ಹತ್ತಿರ ಒಂದು ಮಾತು ಕೇಳಬೇಕಾಗಿದೆ" ಎಂದನು ವಿನಯದಿಂದ. "ಮೇಲೆ ಬಾ" ಎಂದನು ಅಜರಯ್ಯ.

ಪಾದರಸನು ಮೇಲೆ ಬಂದು ಅಜರಯ್ಯನನ್ನು ನೋಡಿ ಜೀನಾಬಳೊಂದಿಗೆ ತನ್ನ ಮದುವೆಯ ವಿಷಯವನ್ನು ಕುರಿತು ಹೇಳಿ, ತನಗೆ ಬೇಕಾದ ಆ ವಸ್ತುಗಳನ್ನು ಕೊಟ್ಟು ಪುಣ್ಯ ಕಟ್ಟಿಕೊಳ್ಳಬೇಕೆಂದು ಕೇಳಿದನು. ಎಲ್ಲವನ್ನೂ ಕೇಳಿ ಅಜರಯ್ಯ ಗಟ್ಟಿಯಾಗಿ ನಕ್ಕು, ಪಾದರಸನ ಕೈಯನ್ನು ಹಿಡಿದು ಪರೀಕ್ಷಿಸಿ. "ಲೋ ! ಪೋರಾ ! ನಿನಗೆ ಜೀವದ ಮೇಲೆ ಆಶೆ ಇದ್ದರೆ, ನನ್ನ ಮಾತು ಕೇಳಿ ಈ ಪ್ರಯತ್ನ ಬಿಟ್ಟುಬಿಡು. ಯಾರೋ ನಿನಗೆ ಕೇಡುಮಾಡಲು ಈ ಸಲಹೆ ಹೇಳಿದ್ದಾರೆ. ನನ್ನ ಆಯುಷ್ಯಕ್ಕಿಂತ ನಿನಗೆ ಆಯುಷ್ಯ ಹೆಚ್ಚಾಗಿದೆ. ಇಲ್ಲದಿದ್ದರೆ ನಿನ್ನನ್ನು ಈ ಕ್ಷಣದಲ್ಲಿ ಕೊಲ್ಲುತ್ತಿದ್ದೆ! ಓಡಿಬಿಡು!" ಎಂದನು.

ಪಾದರಸ ಅಲೀ ಒಮ್ಮೆಗೇ ಕೋಪಗೊಂಡೆದ್ದು, "ದುಷ್ಟಾ! ನಾನು ಕೇಳಿದ್ದು ಕೊಡದಿದ್ದರೆ ಈ ಕ್ಷಣದಲ್ಲಿ





ನಿನ್ನನ್ನು ಕೊಲ್ಲುತ್ತೇನೆ ! ನಾನು ಎಲ್ಲದಕ್ಕೂ ಸಿದ್ಧನಾಗಿ ಬಂದವನು !" ಎಂದು ಗರ್ಜಿಸಿ ಕತ್ತಿ ಹಿರಿದನು.

"ಆ ಕೈ ಬಿದ್ದು ಹೋಗಲಿ, ಹುಂ ಖಿಡಾಕ್ !" ಎಂದನು ಅಜರಯ್ಯ. ಮರುಕ್ಷಣದಲ್ಲಿ ಕತ್ತಿ ಹಿಡಿದ ಪಾದರಸನ ಬಲಗೈ ಮರಗಟ್ಟಿ ಹೋಯಿತು. ಪಾದರಸನು ಕತ್ತಿಯನ್ನು ಎಡದ ಕೈಯಲ್ಲಿ ತೆಗೆದು ಕೊಂಡನು. ಅಜರಯ್ಯನ ಮಂತ್ರದಿಂದ ಅದೂ ಮರಗಟ್ಟಿ ಹೋಯಿತು.

"ಈಗಾದರೂ ನಿನ್ನ ಪ್ರಯತ್ನವನ್ನು ಬಿಡು ವೆಯಾ ?" ಎಂದು ಕೇಳಿದನು ಅಜರಯ್ಯ.

"ನನಗೆ ಆ ದುಪಟಿಯೂ ಅಭರಣಗಳೂ ಬೇಕೇ ಬೇಕು !" ಎಂದನು ಪಾದರಸ.

"ಅದಕ್ಕೆ ಒಂದೇ ಮಾರ್ಗ ! ಕತ್ತೆಯಾಗಿ ಅವು ಗಳನ್ನು ಹೊರು !" ಎಂದು ಅಜರಯ್ಯ ಪಾದರಸನ ಮೇಲೆ ಮಂತ್ರದ ನೀರನ್ನು ಚೆಲ್ಲಿದನು. ಕೂಡಲೇ ಅಲೀಪಾದರಸನು ಕತ್ತೆಯಾಗಿ ಕೂಗಿದನು.

ಮರುದಿನ ಅಜರಯ್ಯ ಅಂಗಡಿಗೆ ಹೋಗುವಾಗ ಕತ್ತೆಯಾದ ಪಾದರಸನನ್ನು ಹೊಡೆದುಕೊಂಡು ಹೋದನು. ಆದಿನ ಸಾಯಂಕಾಲ ಮನೆಗೆ ಬಂದ ಮೇಲೆ, ಅಜರಯ್ಯ ಅಲೀಯನ್ನು ಮತ್ತೆ ಮನುಷ್ಯ ನನ್ನಾಗಿ ಮಾಡಿ, "ಏಕೆ ಹಾಳಾಗಿ ಹೋಗುತ್ತೀ? ನನ್ನ ಆಲೋಚನೆ ಕೇಳಿ ಸುಮ್ಮನೆ ಹೋಗಿಬಿಡು. ಇಲ್ಲದಿದ್ದರೆ ಇನ್ನೂ ಹೀನವಾದ ಪ್ರಾಣಿಯಾಗಿ ಮಾರ್ಪಡಿಸಿ ಬಿಡುತ್ತೇನೆ. ಜಾಗ್ರತೆ !" ಎಂದನು.

ಅಲೀ ಅವನ ಮಾತನ್ನು ಕಿವೀ ಮೇಲೆ ಹಾಕಿ ಕೊಳ್ಳದೆ, ಅಜರಯ್ಯನ ಮೇಲೆ ಧುಮುಕಿನು. ಅಜರಯ್ಯ ಅವನ ಮೇಲೆ ಇನ್ನಿಷ್ಟು ಮಂತ್ರದ ನೀರು ಚೆಲ್ಲಿ, ಅವನನ್ನು ಕರಡಿಯಾಗಿ ಬದಲಾಯಿಸಿ ಬಿಟ್ಟನು. ಕರಡಿ ಅತ್ತಿತ್ತ ಹಾರಾಡಿಕೊಂಡು ಕೋಣೆ ಯೊಳಗೇ ಇತ್ತು.

ಮರುದಿನ ಅಜರಯ್ಯನ ಮ ಗಳು ಕಮರ್ ತಂದೆಯ ಬಳಿಗೆ ಬಂದು. "ಅಪ್ಪಾ, ಈ ಹುಡುಗ ನನ್ನನ್ನು ಮದುವೆ ಮಾಡಿಕೊಳ್ಳುತ್ತಾನೋ ಕೇಳಿರಿ" ಎಂದಳು. "ನಾನು ಕೇಳಲಾರೆ, ನೀನೇ ಕೇಳು. ಕರಡಿ ಯಾದರೂ ಮಾತಾಡುತ್ತಾನೆ" ಎಂದನು ಅಜರ್.

ಕಮರ್ ಅಲೀ ಕರಡಿಯ ಬಳಿಗೆ ಹೋಗಿ, ನಿನಗೆ ಬೇಕಾದದ್ದು ನಾನೋ, ನನ್ನ ವಸ್ತುಗಳೋ?" ಎಂದು ಕೇಳಿದಳು.

"ದಿಲ್ಲೈಲಾಳ ಮಗಳು ಜೀನಾಬಳನ್ನು ಮದುವೆ ಮಾಡಿಕೊಳ್ಳಲು ನಿನ್ನ ಆ ಬಂಗಾರದ ವಸ್ತುಗಳೆಲ್ಲಾ ನನಗೆ ಬೇಕು" ಎಂದನು ಪಾದರಸ.

ತಂದೆಯೊಡನೆ ಕಮರ್ ಆ ಸಂಗತಿ ಹೇಳಿದಾಗ, "ಅವನ ಮನಸ್ಸು ಮಾರಲಾರದು, ನೋಡಿದಿಯಾ?" ಎಂದನು ಅಜರ್. ಆಮೇಲೆ ಅವನು ಅಲೀಮೇಲೆ ಮಂತ್ರದ ನೀರು ಚೆಲ್ಲಿ ಕೋತಿಯನ್ನಾಗಿ ಮಾಡಿದನು.

ಆದಿನ ರಾತ್ರಿ ಕಮರ್ ಒಂದು ನಿಶ್ಚಯಕ್ಕೆ ಬಂದಳು. ತಾನು ಪಾದರಸ ಅಲೀಗೆ ಸಹಾಯ

ಮಾಡಲೇ ಬೇಕು. ಅವನು ತನ್ನನ್ನು ವಿವಾಹಮಾಡಿಕೊಳ್ಳದಿದ್ದರೂ ಸರಿಯೆ, ಅವನ ಸುಖಕ್ಕಾಗಿ ತನ್ನ ವಸ್ತುಗಳನ್ನು ಕೊಡಲೇ ಬೇಕು. ಇಲ್ಲದಿದ್ದರೆ ಅವನು ಸಾಯುತ್ತಾನೆ. ಅದು ಮಹಾ ಪಾಪ! ಆ ಪಾಪಕ್ಕೆ ತಾನೇ ಬಾಧ್ಯಳಾದೇನು. ಹೀಗೆ ನಿಶ್ಚಯಿಸಿ ಆ ರಾತ್ರಿಯಲ್ಲಿ ತನ್ನ ತಂದೆಯೊಂದಿಗೆ ವಾದಮಾಡಿ, ಇಲ್ಲದಿದ್ದರೆ ತಾನು ಸಾಯುವೆನೆಂದು ಹೆದರಿಸಿ ಅವನನ್ನು ಒಪ್ಪಿಸಿದಳು. ತರುವಾಯ ತನ್ನ ವಸ್ತುಗಳನ್ನೆಲ್ಲಾ ಬಂಗಾರದ ಹರಿವಾಣದಲ್ಲಿಟ್ಟು, ಕೋತಿರೂಪದಲ್ಲಿರುವ ಪಾದರಸನ ಬಳಿಗೆ ತಂದು, ಅವನನ್ನು ಮನುಷ್ಯನನ್ನಾಗಿ ಮಾಡಿಸಿ, "ಇಕೋ, ಇವುಗಳನ್ನು ಒಯ್ದು ನಿನ್ನ ಜೀನಾಬಳನ್ನೇ ಮದುವೆಯಾಗು" ಎಂದಳು.

ಪಾದರಸ ಅಲೀಗೆ ಕಮರಳ ಮೇಲೆ ತುಂಬಾ ಅಭಿಮಾನ ಉಂಟಾಯಿತು. ಅವನು ಅವಳನ್ನು ಕೂಡಾ ಕರೆದುಕೊಂಡು ಹಸನ್, ಅಹ್ಮದರ ಬಳಿಗೆ ಹೋದನು.

"ನೀನು ಜೀನಾಬಳನ್ನು ಮದುವೆಯಾದ ಮೇಲೆ ಕಮರಳನ್ನು ಕೂಡಾ ಮದುವೆ ಮಾಡಿಕೊಳ್ಳುವುದು ಒಳ್ಳೆಯದು. ಇವಳು ತಂದೆಗೆ ಒಬ್ಬಳೇ ಮಗಳಾದುದರಿಂದ, ಅವನ ಆಸ್ತಿಪೂರಾ ಅವನ ಅನಂತರ ಕಾನೂನಿನ ಪ್ರಕಾರ ನಿನಗೇ ದಕ್ಕುತ್ತದೆ" ಎಂದರು ಹಸನ್ ಅಹ್ಮದರು.

ಅವರು ದಿಲ್ಲೈಲಾಳನ್ನೂ, ಜೀನಾಬಳನ್ನೂ, ಜುರೇಕನನ್ನೂ ಕರೆಯಿಸಿದರು. ಜುರೇಕನ ಸಾಕ್ಷ್ಯದಲ್ಲಿ ಪಾದರಸನು ಜೀನಾಬಳಿಗೆ ಬಂಗಾರದ ದುಪಟಿ, ಶಿಖಾಭರಣ, ಒಡ್ಯಾಣ, ಚಡಾವುಗಳನ್ನು ಶುಲ್ಕದ ಭರಣವಾಗಿ ಕೊಟ್ಟನು. ಜುರೇಕ್ ಜೀನಾಬಳನ್ನು ಪಾದರಸ ಅಲೀಗೆ ಕೊಡಲು ಒಪ್ಪಿದನು.

ಈ ಭರಣದ ವಸ್ತುಗಳನ್ನು ಸಂಪಾದಿಸಲು ಅಲೀ ಪಟ್ಟ ಕಷ್ಟಗಳನ್ನು ಕೇಳಿದ ಮೇಲೆ, ಅಲೀ ಪಾದರಸನು ಕಮರಳನ್ನು ಕೂಡಾ ಮದುವೆಮಾಡಿಕೊಳ್ಳಲು ಜೀನಾಬ್ ಒಪ್ಪಿದಳು. ಬೇಗದಲ್ಲೇ ಅವರಿಬ್ಬರಿಗೂ ಪಾದರಸ ಅಲೀಯೊಂದಿಗೆ ಮದುವೆಯಾಯಿತು.

ಕೆಲವು ದಿನಗಳ ಮೇಲೆ ಪಾದರಸನು ಖಲೀಫನ ದರ್ಶನಮಾಡಿ ತನ್ನನ್ನು ದರಬಾರಿನಲ್ಲಿ ಇಟ್ಟುಕೊಳ್ಳಬೇಕೆಂದು ಅರ್ಜಿ ಮಾಡಿಕೊಂಡನು. ಆ ಅರ್ಜಿಯನ್ನು ಇಬ್ಬರು ಕೋತ್ವಾಲರೂ, ಪಾರಿವಾಳದ ಅಂಚೇ ನಿರ್ವಾಹಕರೂ ಬಲಪಡಿಸಿದುದರಿಂದ, ಖಲೀಫನು ಅಲೀಯನ್ನು ರಾಜಭಟರ ಮೇಲೆ ಸರದಾರನನ್ನಾಗಿ ನಿಯಮಿಸಿದನು, ತಿಂಗಳಿಗೆ ಸಾವಿರ ದೀನಾರಗಳ ವೇತನ ಪಡೆಯುತ್ತ, ಅಲೀ ಪಾದರಸನು ಜೀನಾಬ್ ಕಮರ್‌ಗಳೊಂದಿಗೆ ಸುಖವಾಗಿದ್ದನು. (ಮುಗಿಯಿತು)

